# ಕೊರವಂಜಿ

Koravanji

ಅಕ್ಟೋಬರ್
೧೯೫೭



ಸಂಪಾದಕರು :
ಶ್ರೀ|| ರಾ. ಶಿ.

ಬರಹಗಾರರು :

ಶ್ರೀ|| ಪಾಪಿ
ಶ್ರೀ|| ಬಚ್ಚ
ಶ್ರೀ|| ಕಾಮತ್
ಶ್ರೀ|| ಪ್ರಕಾಶ್
ಶ್ರೀ|| ರೇವಣ್ಣ
ಶ್ರೀ|| ನಾ. ಕ.
ಶ್ರೀ|| "ಕೇಫ"
ಶ್ರೀ|| ಉಡಪೀ
ಶ್ರೀ|| ರಾಮಿ
ಶ್ರೀ|| ದಾಶರಥಿ ಧೀಕ್ಷಿತ್

ಇತ್ಯಾದಿ, ಇತ್ಯಾದಿ.

ಬಿಡಿ ಪ್ರತಿ

## ಕನ್ನಡ ಚಿತ್ರಜಗತ್ತಿನ ಹೊಸಧ್ವನಿ



ವಿಕ್ರಂರವರ—

# ಭಕ್ತ ಮಾರ್ಕಂಡೇಯ

(ಕನ್ನಡ)

—: ತಾರಾಗಣ :—

**ನಾಗಯ್ಯ, ಪುಷ್ಪವಲ್ಲಿ, "ಪದ್ಮಿನಿ ಪ್ರಿಯದರ್ಶಿನಿ" ನೂತನತಾರೆ**

**ಮಾ|| ಬಾಬ್ಜಿ, ಬೇಬಿ ಉಮಾ, ನರಸಿಂಹರಾಜು,**

**ಡಿಕ್ಕಿ ಮಾಧವರಾವ್, ಲಕ್ಷ್ಮೀಕಾತಂ**

**ನಿರ್ದೇಶನ ಮತ್ತು ಛಾಯಾಗ್ರಹಣ: ಬಿ. ಎಸ್. ರಂಗಾ**

ಸಂಗೀತ: ವಿಶ್ವನಾಥಂ ಮತ್ತು ರಾಮಮೂರ್ತಿ ಸ್ಟುಡಿಯೊ: ವಿಕ್ರಂ

*Sole Distributors for:*

Mysore State, South Canara, Coorg and Bombay Presidency

# VIKRAM PICTURES

6, COTTONPET : : BANGALORE-2.

ಭರದಿಂದ
ತಯಾರಾಗುತ್ತಿದೆ!



ಪಂಡರೀಬಾಯಿ
ಮೈನಾವತಿ
ರಾಜಕುಮಾರ್
ಮಾಧವರಾವ್
ಮತ್ತು ಇತರರು.



ಜಗನ್ನಾಥ್ ಪ್ರೊಡಕ್ಷನ್ಸ್ ರವರ

# ಭಕ್ತ ವಿಜಯ

ಕನ್ನಡ

ಸ್ಟುಡಿಯೋ
ಫಿಲಂ ಸೆಂಟರ್

CHITRA PUBLICITIES

istributors for:

Mysore State, Coorg and South Canara
**Sri Raghavendra Pictures,**
BANGALORE-9

Bombay Presidency and Hyderabad State
**Film Centre (Private) Ltd.,**
VADAPALANI POST, MADRAS-26

For other particulars contact:

**JAGANNATH PRODUCTIONS,**
8, SIVA KOIL STREET, KODAMBAKKAM, MADRAS-24

# ಜೀವನದ ಸಹಜ ಚಿತ್ರಣವುಳ್ಳ ಭಾವಪ್ರಧಾನ ಕಥೆ!

## ಅಕ್ಟೋಬರ್ ತಿಂಗಳಲ್ಲಿ ಪ್ರದರ್ಶನಕ್ಕೆ ಬರುತ್ತದೆ

ಎ. ವಿ. ಎಂ ಸ್ಟುಡಿಯೋದಿಂದ ಒಂದು ಉತ್ತಮ ಚಿತ್ರ

ಎಸ್. ಕೆ. ಪಿಕ್ಚರ್ಸ್‌ರವರ ಸಾಮಾಜಿಕ ಕೃತಿ

# ಕುಲದೈವಂ

—[ ತಮಿಳು ]—

ಪಂಡರಿಬಾಯಿ – ಮೈನಾವತಿ – ಎಂ. ಎನ್. ರಾಜಂ – ಸಹಸ್ರನಾಮಂ

ಎಸ್. ಎಸ್. ರಾಜೇಂದ್ರನ್ – ಚಂದ್ರಬಾಬು – ಅಂಗಮುತ್ತು

ಮುಂತಾದವರ ಅಭಿನಯ.

ಸಂಭಾಷಣೆ:
**ಮಾರನ್, ಎಂ.ಎ.,**

ನಿರ್ದೇಶನ:
**ಕೃಷ್ಣ – ಪಂಜು**

ಕಟಕ



## ಕನ್ನಡ ಚಿತ್ರರಂಗದ ಭಾಗ್ಯತಾರೆ !




ಮೈಸೂರು ಸಂಸ್ಥಾನ, ದಕ್ಷಿಣ ಕನ್ನಡ ಮತ್ತು
ಕೊಡಗು ಜಿಲ್ಲೆಗಳಿಗೆ

ಹಂಚಿಕೆದಾರರು :

## ವಿಜಯ ಟಾಕೀ ಡಿಸ್ಟ್ರಿಬ್ಯೂಟರ್ಸ್,

ಗಾಂಧಿನಗರ : : : : ಬೆಂಗಳೂರು-9




ಸಂಪುಟ ೧೬ ಅಕ್ಟೋಬರ್ ೧೯೫೬ ಸಂಚಿಕೆ ೭

## ಕುಹಕಿಡಿಗಳು

---

'ಆ' ರಾಷ್ಟ್ರೀಕರಣ, 'ಈ' ರಾಷ್ಟ್ರೀಕರಣ ಮಾಡುವ ಬದಲು ರಾಷ್ಟ್ರವನ್ನು ರಾಷ್ಟ್ರೀಕರಣ ಮಾಡಬಾರದೇ ಎಂದು ಹಲವರು ಹಿರಿಯರು ಕೊರಗುತ್ತಿದ್ದಾರಂತೆ.

* * *

ಅರಿಶಿನ ಹಚ್ಚಿಕೊಂಡು ಬಂದ ಕಾಲೇಜ ತರುಣಿಯನ್ನು ಎಲ್ಲರೂ ಮಡಾಂ ಚಿಯಾಂಗ್ ಕೈಷೇಕ್ ಎಂದು ಕರೆದರಂತೆ.

* *

ಅಂಬರ ಚರಕಾದ ಸುಧಾರಣೆಗೆ ಲಾಂಕಷೈರಿನಿಂದ ಪ್ರವೀಣರನ್ನು ಕರೆದು ತರಲು ನಮ್ಮ ಪ್ರವೀಣರು ನಿಯೋಗ ಹೋಗುತ್ತಾರೆಂಬುದು ಖಂಡಿತವಲ್ಲವಂತೆ.

* * *

ಮಾರ್ಲಿನ್ ಮನ್ರೋವಿನ ಕುಲುಕು ನಡಿಗೆಯನ್ನು ನೋಡಿದ ಮುದುಕರೊಬ್ಬರು—ಅಯ್ಯೋ ಪಾಪ! ಬಾಣಂತನದಲ್ಲಿ ಸೊಂಟಕ್ಕೆ ಪಟ್ಟಿಯನ್ನೇ ಕಟ್ಟಿಕೊಳ್ಳಲಿಲ್ಲ ಆಕೆ! ಎಂದು ಮರುಗಿದರಂತೆ.

* * *

ಈ ಸಾರಿ ನವರಾತ್ರಿಹಬ್ಬಕ್ಕೆ, ಒಬ್ಬಾಕೆಯ ಮನೆಯಲ್ಲಿ ಮಾಜಿ ಮಂತ್ರಿಗಳ ಗೊಂಬೆಗಳನ್ನೇ ಮೆಟ್ಟಿಲು ಮೆಟ್ಟಲಾಗಿ ಇಟ್ಟಿದ್ದರಂತೆ.

*　　*　　*

ಜೋಡಿದಾಳ್ ಹುಲಿಗಳಿಗೆ ಪ್ರಸಿದ್ಧವಂತೆ.

—ಕಡಿದಾಳ್ ಕೂಡ ಇನ್ನುಮೇಲೆ ಹುಲಿಗಳಿಗೆ ಹೆಸರಾಯ್ತುಂತೆ.

*　　*　　*

ಕಣ್ಣಿಗೆ ಕಾಡಿಗೆ ಹಚ್ಚಿಕೊಂಡಾಕೆಯನ್ನು, ಉಗುರಿಗೆ ರಂಗು ಹಚ್ಚಿದಾಕೆ ಹಾಸ್ಯಮಾಡಿದಳಂತೆ.

*　　*　　*

ಭಾಷಾವಾರು ಸಮಸ್ಯೆಗೆ—ಇಂಗ್ಲೀಷೇ ಮದ್ದು ಎಂದು ಇನ್ನೂ ಯಾರೂ ಹೇಳಿಲ್ಲವಂತೆ.

*　　*　　*

ಚುನಾವಣೆ ಬಂತು ಎಂದು ಪಕ್ಷ ಪಕ್ಷದ ತಿಥಿಗೆ ಏರ್ಪಾಡು ಮಾಡುತ್ತಿರುವ ರೆಂಬುದು ಖಂಡಿತವಲ್ಲವಂತೆ.

*　　*　　*

ನಿರುದ್ಯೋಗಿ ವಿದ್ಯಾವಂತರ ಸಮಸ್ಯೆಯ ಪರಿಹಾರಕ್ಕೇನೇ ಈ ಚುನಾವಣೆಯ ಏರ್ಪಾಡೆಂಬುದು ಬರೀ ಕುಹಕ!!

*　　*　　*

ತಾಂಡನ್—ನಾಯ್ಕರ್ ಸಂವಾದವು ಇಬ್ಬರಿಗೂ ಚೆನ್ನಾಗಿ ಅರ್ಥವಾಯ್ತುಂತೆ.

—ಅಂದಮೇಲೆ ಬೈಗಳಭಾಷೆ ಲೋಕದಲ್ಲೆಲ್ಲಾ ಅತಿ ಅತಿ ಹತ್ತಿರವಲ್ಲವೇ?

*　　*　　*

ಹೊಸ ಹೈಡ್ರೋಜನ್ ಬಾಂಬಿನ ಪರೀಕ್ಷಾರ್ಥ ಆಸ್ಫೋಟನೆಗೆ ರಾಜಾಜಿ ಯವರನ್ನು ಅಧ್ಯಕ್ಷರನ್ನಾಗಿ ಕರೆಯುವುದಿಲ್ಲವಂತೆ.

*　　*　　*

ವಿಜಯದಶಮಿಯಂದು ಇನ್ನುಮೇಲೆ ಪ್ರಧಾನ ಸಚಿವರೇ "ಬನ್ನಿ! ಬನ್ನಿ! ಮಂಟಪಕ್ಕೆ" ಹೋಗುತ್ತಾರೆಂಬುದು ಶುದ್ಧ ಸುಳ್ಳಂತೆ.

*　　*　　*

ಪಂಚಸಂಸ್ಥಾನಗಳಿಂದ ಕೂಡಿ ಇನ್ನುಮೇಲೆ ನವ ಮೈಸೂರು ಮೆರೆಯುತ್ತದೆ ಯಂತೆ.

—ದ್ರೌಪತಿಯಂತೆ! ಕುರುಕ್ಷೇತ್ರವಾಗದಿದ್ದರೆ ಸಾಕು!!

*　　*　　*

# ಉರಿಗಾಳು

---

ಅನಗತ್ಯ ಅಂಶಗಳನ್ನು ಕಿತ್ತೊಗೆಯುವುದರಿಂದ ಕ್ರಿಕೆಟ್ ಆಟ ಉತ್ತಮವಾಗುವುದೆಂಬುದು ನನ್ನ ದೃಢ ನಂಬುಗೆ, ಎಂದು ಬ್ರಾಡ್ಮನ್‌ರವರು ಹೇಳಿಕೆ ಇತ್ತಿದ್ದಾರೆ .. ನಮ್ಮ ಬೀದಿಯ ಬ್ರಾಡ್ಮನರು ಅಂಪೈರುಗಳೇ ಆ ಅನಗತ್ಯ ಅಂಶಗಳು ಎಂದು ನಮಗೆ ಸೂಚನೆ ಇತ್ತಿದಾರೆ.

* * *

"ತಾವರೆಕೆರೆಯಲ್ಲಿ ರೆವೆನ್ಯೂ ಸಚಿವರು" (ಶಿರೋನಾಮೆ)....ಕಾಲು ಜಾರಿತೋ ಏನೊ, ಪಾಪ!

* * *

ಒಳಜಗಳಗಳೇ ಕಾಂಗ್ರೆಸ್ ಪಕ್ಷಕ್ಕೆ ಹೆಚ್ಚು ಕಂಟಕಪ್ರಾಯವಾಗಿವೆ, ಎಂದು ಶ್ರೀ ಗುಲ್ಜಾರಿಲಾಲ್ ನಂದಾರವರು ಹೇಳಿದರು....ಜಗಳುವ ನಾಯಿ ಕಚ್ಚುವುದಿಲ್ಲ, ಸ್ವಾಮಿ.

* * *

ಹತ್ತು ಮಂದಿ ಕುಂಟರನ್ನು ಸೇರಿಸಿದರೆ, ಒಬ್ಬ ದೃಢಕಾಯನಾಗುತ್ತಾನೆಯೆ?, ಎಂದು ನೆಹರು ಕೇಳಿದರು........ಏಕೆ? ಬಾಂಡುಂಗ್ ಕಾನ್‌ಫರನ್ಸ್‌ನಲ್ಲಿ ಹಾಗೆ ಮಾಡಿಲ್ಲವೆ?

* * *

ಗೃಹಕೈಗಾರಿಕೆಯಾಗಿ ಸಾಬೂನು ತಯಾರಿಸುವುದರಿಂದ 4000 ಮಂದಿಗೆ ಪೂರ್ಣಕಾಲ ಉದ್ಯೋಗ ದೊರೆತಂತಾಗುವುದಂತೆ........ಬಟ್ಟೆಗಳಿಗೆ ಆ ಸಾಬೂನನ್ನು ಅಹೋರಾತ್ರಿ ಉಜ್ಜಬೇಕಾಗುತ್ತದೆ, ಎಂಬುದೇ ಇದರ ಅರ್ಥವಿರಬೇಕು.

* * *

ಪದವೀಧರರು ಒಂದು ವರ್ಷ ಸಂಬಳವಿಲ್ಲದೆ ದುಡಿಯಬೇಕೆಂದಿದ್ದ ಸಲಹೆಯನ್ನು ತಳ್ಳಿಹಾಕಲಾಗಿದೆ........ಅಂದರೆ, ಅವರು ಮಾವನ ಮನೆಯಲ್ಲೇ ಆ ನಿರುದ್ಯೋಗಾವಧಿಯನ್ನು ಕಳೆಯಬಹುದು

* * *

ನಮ್ಮ ಶಾಲಾ ಪರೀಕ್ಷೆಗಳಲ್ಲಿ ನಾವು ಹುಡುಗರ ಮೇಲೆ ವೀಕ್ಷಕರನ್ನಿರಿಸಿ ಅವರನ್ನು ಅಪಮಾನಗೊಳಿಸುವುದಿಲ್ಲ........ಎಂಟೆಂಟು ಮಾರು ದೂರದಲ್ಲಿ ಒಬ್ಬೊಬ್ಬರನ್ನು ಪ್ರತ್ಯೇಕ ಪ್ರತ್ಯೇಕ ಕೂರಿಸಿ, ಬಾಗಿಲೀಚೆ ಒಬ್ಬರು ಮೇಷ್ಟರನ್ನು ನಿಲ್ಲಿಸುತ್ತೇವೆ ಅಷ್ಟೆ (ವರದಿ).

* * *

"ಏನಯ್ಯಾ, ಅವುಳಿ ಜವುಳಿ ಅಂತೆ, ನಿಮ್ಮ ಮಕ್ಕಳು?"...."ಹೌದು! ಒಂದು ಹೆಣ್ಣು, ಮತ್ತೊಂದು ಗಂಡು....ಅಥವ, ಒಂದು ಗಂಡು, ಮತ್ತೊಂದು ಹೆಣ್ಣು, ಅಂತೂ ಒಂದು ಗಂಡು, ಒಂದು ಹೆಣ್ಣು, ಅಂತ ಹೇಳಿದರು, ಡಾಕ್ಟರು"

* * *

ರೇಡಿಯೊ ಪ್ರಸಾರದಲ್ಲಿ ಕೇಳಿದ್ದು : "ಈಗ ಹತ್ತು ಸೆಕಂಡುಗಳ ಕಾಲ ನಿಮ್ಮ ರೇಡಿಯೊದಲ್ಲಿ ಏನೂ ಕೇಳಿಸಿಲ್ಲ, ಅಲ್ಲವೆ? ಅದಕ್ಕೆ ಕಾರಣ, ಯಾವ ಕಾರಣಾಂತರವೂ ಅಲ್ಲ.......ಅಷ್ಟೇ ನಿಶ್ಶಬ್ಧವಾಗಿ, ನಮ್ಮ ಟೈಪ್‌ರೈಟರುಗಳು ಕೆಲಸ ಮಾಡುವುವು ಎಂಬ ಜಾಹಿರಾತು ಅದು...."

* * *

ಪ್ರಾಣಾಯಾಮ ಮಾಡಿದರೆ ನಮ್ಮ ರಕ್ತದಲ್ಲಿರುವ ವಿಷಕ್ರಿಮಿಗಳು ಸತ್ತು ಹೋಗುತ್ತವೆ. (ಭಾಷಣ)....ಅದು ಸರಿ! ಆದರೆ, ಆ ಕ್ರಿಮಿಗಳಿಗೆ ಪ್ರಾಣಾಯಾಮ ಕಲಿಸುವುದು ಹೇಗೆ?

* * *

ಮಂತ್ರಿಗಳೊಬ್ಬರು ಡಿಲ್ಲಿಗೆ ಹೋದಾಗ, ರಾಷ್ಟ್ರನಾಯಕರೊಬ್ಬರು ಅವರ ಕೈ ಕುಲುಕುತ್ತ, "ನಿಮ್ಮ ವಿಷಯ ತುಂಬಾ ಕೇಳಿದೇನೆ" ಅಂದರಂತೆ. ಆಗ ಮಾಜಿಮಂತ್ರಿಗಳು, "ಇರಬಹುದು! ಆದರೆ, ಅವೆಲ್ಲ ಬರೀ ಸುಳ್ಳು, ಸ್ವಾಮಿ.... ... ನಂಬಬೇಡಿ, ದಯವಿಟ್ಟು" ಅಂತ ಅನ್ನಬಹುದೆ?

* * *

---

# ಕೊರವಾವಲೋಕನ

---

ಬಿಳಿ ಮಗ್ಗಲುಹಾಸಿಗೆ ಬಟ್ಟೆಯಲ್ಲಿ ನೆಹ್ರೂ ಜುಬ್ಬ ತೊಟ್ಟಿದ್ದಾನೆ; ಅಂತಹ ಬಟ್ಟೆಯ ಥೊತ್ರವನ್ನೇ, ಪಂಜಾಬಿಗಳಂತೆ, ಪಂಚೆ ಕಚ್ಚೆ ಕಟ್ಟಿ ಉಟ್ಟಿದ್ದಾನೆ. ತಾನು ಕುಳಿತಿದ್ದ ಕುರ್ಚಿಯೆದುರು ಮೇಜಿನ ಮೇಲೆ ಗರಿ ಗರಿಯಾದ ಅಚ್ಚು ಬಿಳಿಯ ಟೋಪಿಯನ್ನೂ ವಾರಣವಾಗಿರಿಸಿದಾನೆ. ಅನತಿ ದೂರದಲ್ಲೇ ಅವನ ಪಾನೀಯದ ಗಾಜಿನ ಲೋಟಾ ರಂಜಿಸುತ್ತಿದೆ!

ಇದೇ ದೃಶ್ಯ ನಾನು ಕಂಡುದು, ಶನಿವಾರ ಸಂಜೆ ಕ್ಲಬ್ಬಿನಲ್ಲಿ. ಆತ ಕೊರವ!

ಎಲಎಲಾ ನೀನು ಹಾಕಿರುವ ವೇಷಭೂಷಣಗಳೇನು? ನೀನು ಕುಡಿಯುತ್ತಿರುವ ಪಾನೀಯದ ವಾಸನೆಯೇನು? ನಿನಗೇನು ಬಂತು ಈ ಇಳಿವಯಸ್ಸಿನಲ್ಲಿ? ಎಂದೆಲ್ಲಾ ಪ್ರಶ್ನೆಗಳು ತೋರಿ ಬಂದುವು. ಅವೇ ರೀತಿ ತಡೆಯಲಾರದೆ ಅವನೆದುರಿನ ಕುರ್ಚಿಯಲ್ಲಿ ಎರಡೂ ಹುಬ್ಬುಗಳನ್ನು ಪ್ರಶ್ನಾರ್ಥವಾಡಿಕೊಂಡು, ಕೇಳಿಯೇಬಿಟ್ಟೆ.

ಅವ ಒಂದು ಗುಟುಕು ಕುಡಿದು, ತುಟಿಯನ್ನೂ ನಾಲಿಗೆಯಿಂದ ತಣಿಸಿ, ಹೇಳಿದ. "ಮಗೂ! ಆ ಟೋಪಿಯಾ ಕೆಳಗೆ ಇಂತಹವುದನ್ನು ಎಂದೂ ಯಾರೂ ಮಾಡಬಾರದು. ಅದಕ್ಕೇ ಟೋಪಿ ಅಲ್ಲೇ ತೆಗೆದಿರಿಸಿದ್ದೇನೆ, ಹುಷಾರಾಗಿ ಈ ವಸ್ತ್ರ, ಈ.... ಈ ... ಈ....ಎಂದು ಇನ್ನೊಂದು ಗುಟುಕು ಕುಡಿದು ಮುಂದುವರಿಸಿದ– ಇದೆಲ್ಲಾ ಇಂದಿನ ದಿನಪತ್ರಿಕೆಯ ಸುದ್ದಿಯ ಪರಿಣಾಮ. ಇಂದಿನ ಸುದ್ದಿಗಳು ಎರಡೇ! ಒಂದು ಇನಾಂದಾರಿ ರದ್ದು ಈಗಲೇ ಜಾರಿಯಾಗುತ್ತಿದೆಯಂತೆ. ಇನ್ನೊಂದು ಖಾದಿ ಬೋರ್ಡ್ ಸ್ಥಾಪನೆ. ಮೊದಲ ಸುದ್ದಿಯಿಂದ ನಾನು ಭಿಕಾರಿ ಯಾಗುತ್ತೇನೆ. ಈಗ ನಾನು ಬದುಕಬೇಕಾದರೆ ಎರಡನೇ ಸುದ್ದಿಯೇ ಗತಿ. ಆ ಕಾರಣದಿಂದಲೇ ನಾನು ಈ ಪೋಷಾಕಿಗೆ ಇಳಿದಿದ್ದೇನೆ. ಆದಷ್ಟು ಗಂಟಲು ದೊಡ್ಡದು ಮಾಡಿಕೊಂಡು, ಅಪದ್ಧೋವಾ, ಸುಪದ್ಧೋವಾ ಅಂತೂ ಇಂತೂ ಆ ಬೋರ್ಡಿನಲ್ಲಿ ಸದಸ್ಯನಾದರೆ ಹೊರದೇಶದ ಪ್ರವಾಸ, ಸಿದ್ಧ,!" ನನ್ನ ಮುಂಬಾಳು ಹೊನ್ನಾಯ! ಈಗ ಅರ್ಥವಾಯ್ತೇ ಮಗು!" ಎಂದ.

ಪರಮಾತ್ಮನ ಲೀಲೆ! ಯಾವ ಹೊತ್ತಿನಲ್ಲಿ ಯಾರು ಯಾರಿಗೆ ಬಾಳ ಸೊಬಗನ್ನನುಭವಿಸಲು ಯಾವ ದಾರಿ ತೋರುತ್ತಾನೋ!

ಎಂದು ಆಶ್ಚರ್ಯಪಡುತ್ತಾ, ಎದುರು ಹಾರಿ ಬಂದ ಸೊಳ್ಳೆಯನ್ನು ಚಪ್ಪಾಳೆಯಾಡಿ ಹೊಡೆಯಲೆತ್ನಿಸಿದೆ. ಅಂಗ್ಯೆ ಅಂಗ್ಯೆ ತಾಕಿತು. ಉರಿಯುಂಟಾಯ್ತೇ ವಿನಹಾ ಸೊಳ್ಳೆ ಸಿಗಲೇ ಇಲ್ಲ. ಅದು ಆ ವೇಳೆಗೆ ಕಿವಿಯ ಒಳಕ್ಕೇ ಬಂದು ಘುಂಯಗುಟ್ಟಿತು.

*  *  *

ಶುಕ್ರ, ಶನಿ, ಭಾನು ಮೂರು ಸಂಜೆಯೂ ಕೊರವ ಕ್ಲಬ್ಬಿಗೆ ಬರಲಿಲ್ಲ. ನಮ್ಮ ಗುಂಪಿನಲ್ಲಿ ಅವನಿಲ್ಲದಿದ್ದರೆ, ಕುಂಕಮವಿಲ್ಲದ ತಾಯಂತೆ, ಬಲು ಕಠಿಣವಾತಾವರಣ. ನಾವು ಹೇಳಬಹುದಾದ ಕುಯ್ಯೋಕ್ತಿಯನ್ನೂ ನಮಗೆ ಮೊದಲೇ ಹೇಳಿ, ಎಲ ಎಲಾ ಇವ ನನ್ನ ಮನಸ್ಸಿನಲ್ಲಿದ್ದದನ್ನು ಹೇಗೆ ಕದ್ದುಕೊಂಡ ಎಂದು ನಮಗೆಲ್ಲಾ ಅನ್ನಿಸುವಂತೆ ಮಾಡುತ್ತಿದ್ದ ಕೊರವ. ಆ ಕಾರಣದಿಂದ ಆ ಮೂರು ದಿನ, ಚಾಲೂಕು ಸಂಸಾರದ ಮೂರು ದಿನಗಳಂತೆ ಕಳೆದುವು, ತಿಂದ ತಿಂಡಿ ರುಚಿಯಿಲ್ಲ! ಉಟ್ಟ ಉಡಿಗೆ ಸೊಗಸಿಲ್ಲ!!

ಏನು ಕಾರಣ ನೋಡೇಬಿಡೋಣ ಅಂತ ನಾನೂ ಅರವಾಮೊದ್ದೂ ಇಬ್ಬರೂ ಸುಮಾರು ೪ ಗಂಟೆಗೆ ಕೊರವನ ಮನೆಗೆ ಹೋದೆವು. ಮನೆ ಬಾಗಿಲಲ್ಲಿ ಇರಬೇಕಾದ ನಾಯಿ ಇರಲಿಲ್ಲ. ನಮ್ಮನ್ನು ಎದುರುಗೊಳ್ಳಲು ವರಾಂಡಾದಲ್ಲಿರಬೇಕಾದ ಜವಾನ ಇರಲಿಲ್ಲ. ಬಾಗಿಲು ದಾಟಿ, ಡ್ರಾಯಿಂಗ್ ರೂಮಿಗೆ ಹೋದಾಗ, ಆ ಸೋಫಾದ ಮೇಲಿರಬೇಕಾದ ಬೆಕ್ಕೂ ಇರಲಿಲ್ಲ!

ಒಂದು ಬಾರಿ ಇಬ್ಬರೂ ಕೆಮ್ಮಿದೆವು, ಅನಿರೀಕ್ಷಿತವಾಗಿ, ಆಟೋಮ್ಯಾಟಿಕ್ಕಾಗಿ.

ಕೊರವನ ಅಂಕುಶ ಪ್ರತ್ಯಕ್ಷವಾದಳು. ನಮ್ಮನ್ನು ನೋಡಿದಳು. ಆಕೆಯ ಮುಖದ ಮೇಲೆ ತುಟಿಯಂಚಿನಲ್ಲಿ ಮುಗುಳ್ನಗೆ ಕಾಣಿಸಿತೇನೋ! ಆದರೂ ಮೂಗಿನಿಂದ ಗಲ್ಲದವರೆಗೂ ಎರಡೂ ಪಕ್ಕದಲ್ಲಿ ಎರಡು ತೀಕ್ಷ್ಣ ದುಃಖಸೂಚಕ, ಹಾಗೂ ಸಂತಾಪ ಸೂಚಕ ರೇಖೆಗಳು ಕಾಣಿಸಿದವು. ಬಾಯ್ತೆರೆದಳು "ಅವರು ಗ್ಯಾರೇಜಿನಲ್ಲಿ ಬಡಗಿ ಕೆಲಸ ಕಲಿಯುತ್ತಿದ್ದಾರೆ," ಅಂದು ಮೊಗಮ್ಮಾಗಿ ಹೇಳಿ, ಅಂತರ್ಧಾನಳಾದಳು.

ನೀವು ಬೆಳೆದ ಹೆಣ್ಣುಮಕ್ಕಳ ಕಾಲೇಜಲ್ಲಿ ಕಾಳಿದಾಸನ ಪಾಠ ಹೇಳುವ ಅಧ್ಯಾಪಕರು ಎಂದುಕೊಳ್ಳಿ. ಸಂಜೆ, ಪರೀಕ್ಷೆಯ ಸಲುವಾಗಿ, ಹೆಚ್ಚು ಪಾಠ ಹೇಳುತ್ತಿದ್ದೀರಿ ಅನ್ನುಕೊಳ್ಳಿ ರಸ ನಿಮಿಷ ಬಂದಿದೆಎನ್ನುಕೊಳ್ಳಿ. ಆಗ ಮನೆಯಿಂದ ನಿಮ್ಮ ವಯಸ್ಸಾದಾಕೆ ಎಡಗೈಲಿ ಮೊರ ಬಲಗೈಲಿ ಕಸಪರಿಕೆ ಹಿಡಿದುಕೊಂಡು ನೀವು ಪಾಠ ಕಲಿಸುವ ಕೊಠಡಿಗೆ ಬಂದಳು ಎನ್ನುಕೊಳ್ಳಿ. ಬಲಗೈಯ್ಯಿನ ಆಯುಧದಿಂದ ನಾಲ್ಕಾರು ಬಾರಿ ನಿಮ್ಮನ್ನು ಥಳಿಸಿದಳು ಎಲ್ಲರೆದುರಿಗೂ ಅಂದುಕೊಳ್ಳಿ. ನಂತರ ಮೃದುವಾಗಿ ನಿಮ್ಮ ಮುಖದೆದುರಿಗೆ, ಮೊರವನ್ನು ಹಿಡಿದು, ಮೆಲ್ಲಗೆ ಬೆಣ್ಣೆಯಲ್ಲಿ

ಕೂದಲು ತೆಗೆದಂತೆ, ನಿಮ್ಮ ಮುಖವನ್ನು ಆ ಕಸಪರಿಕೆಯಿಂದ ಹಗೂರಾಗಿ ಶುಭ್ರ ಗೊಳಿಸಿದಳು ಎಂದುಕೊಳ್ಳಿ.

ಆಗ ನಿಮ್ಮ ಮುಖ ಹೇಗಿರುತ್ತೇ! ಹಾಗೇ ಇತ್ತು ನಮ್ಮಿಬ್ಬರ ಮುಖ.

ಮರು ಮಾತಾಡದೆ ಹೊರಬಿದ್ದು, ಹೊಸಿಲು ಎಡವಿ ಎದ್ದು ಇಬ್ಬರೂ ಮನಸ್ಸಿನ ವೇಗದಲ್ಲಿ ಮನೆಯ ಹಿಂದುಗಡೆಯಿದ್ದ ಗ್ಯಾರೇಜನ್ನು ಸೇರಿದೆವು!

ಅಲ್ಲಿ ಏನನ್ನೂ ಕಂಡೆವು ಅಂತೀರೀ!

ಒಂದು ಚಡ್ಡಿ ಒಂದು ಬನಿಯನ್ ಧರಿಸಿದ, ಮೂರು ದಿನದಲ್ಲೇ ಟಾಗೂರ್ ಗಡ್ಡವನ್ನು ಬೆಳಸಿದ, ಗುಳಿ ಕಣ್ಣಿನ ಮೊಗದ ಕೊರವ!!

ಒಬ್ಬರನ್ನೊಬ್ಬರು ಜಿಗುಟಿಕೊಂಡೆವು ಇದು ಕನಸಲ್ಲಾ ಎಂದು ಖಚಿತ ಪಡಿಸಿ ಕೊಳ್ಳಲು. ತಿರುಗಿ ನೋಡಿದೆವು.

ಕೊರವ ಬಡಗಿಯ ಕೆಲಸ ಮಾಡುತ್ತಿದ್ದಾನೆ. ಸುತ್ತಲೂ ಅದರ ಸಲಕರಣೆಗಳು ಎದುರು ಗೋಡೆಯಮೇಲೆ ನಾಲ್ಕಾರು ರೇಖಾ ಚಿತ್ರಗಳು. ದೃಷ್ಟಿಸಿ ನೋಡಿದರೆ ಚರಕಾದ ಚಿತ್ರಗಳು.

ತಲೆ ಕೊಡವಿಕೊಂಡೆವು ಇಬ್ಬರೂ. ಒಬ್ಬರ ತಲೆಯನ್ನು ಇನ್ನೊಬ್ಬರು ತುರಿಸಿದೆವು. ಕಣ್ಣುಗಳು ಕೆಂಪೇರಿದುವು. ತುಟಿಗಳು ಅದುರ ತೊಡಗಿದವು. ತಲೆಯ ಕೂದಲುಗಳೆಲ್ಲಾ ರೇಗಿದ ಮುಳ್ಳು ಹಂದಿಯ ತೆರನಾಗೆದ್ದು ನಿಂತುವು.

ಮುಖ್ಯ ಕೋಪ, ಸಂತಾಪ, ಸುಸ್ತು ಮೂಡಿದ್ದವು.

ಆಗ ಆ ಮರ ಕರ್ಮಯೋಗಿ, ಸಮಾಧಿಯಿಂದ ಎಚ್ಚೆತ್ತ. ಕನಿಕರದಿಂದ ಪಾಮರರಿಬ್ಬರನ್ನೂ ನೋಡಿದ. ಅಮೃತವಾಣಿಯಿಂದ ನುಡಿದ. ಯಾಕ್ರೋ! ಮಕ್ಕಳಾ! ಇಲ್ಲಿಗೆ ಬಂದು ನನ್ನ ಕೆಲಸ ಹಾಳು ಮಾಡುತ್ತಿದ್ದೀರಿ! ಮೂರು ದಿನಗಳಿಂದ ಹೊಟ್ಟೆಗಿಲ್ಲದೆ, ನಿದ್ರೆಯಿಲ್ಲದೆ, ಈ ತಪಸ್ಸು ಮಾಡುತ್ತಿದ್ದೆ. ಇನ್ನೊಂದೆರಡು ಗಂಟೆಗಳಲ್ಲಿ ಕುಬೇರ ಪ್ರತ್ಯಕ್ಷನಾಗುತ್ತಿದ್ದ ಅಷ್ಟರಲ್ಲೇ ವಿಶ್ವಾಮಿತ್ರನಿಗೆ ಮೇನಕೆ ಕಾಣಿಸಿದಂತೆ ನೀವು ನನಗೆ ಕಾಣಿಸಿಕೊಂಡು, ನನ್ನ ತಪಸ್ಸನ್ನು ಹಾಳು ಮಾಡಿದಿರಿ!

ಎದುರಿಗೆ ನೋಡಿ! ಈ ಚರಕಗಳ ರೇಖಾ ಚಿತ್ರಗಳನ್ನೂ! ಮೊದಲನೆಯದು ಅಂಬರ ಚರಖಾ! ಯಾವ ಮಿಲ್ಲಿನಲ್ಲಿ ನೋಡಿದರೂ ಅದರ ರೂಪು ನೀವು ಕಾಣಬಹುದು ಆದರೆ ಅಂತರ ಆತ್ಮ ಸ್ವಾವಲಂಬನೆ! ಅದನ್ನು ಸೃಷ್ಟಿಸಿದವನು, for ever ಅಂಬರಾ! ರೀತಿ ಬಾಳುತ್ತಾನೆ.

ಎರಡನೆಯ ಚಿತ್ರ ಬಂಜರ ಚರಖಾ ! ಯಾವ ಮರಳ್ಗಾಡಿನಲ್ಲಾದರೂ, ಮರಳಿನಲ್ಲೇ ನೂಲಬಹುದು ! ಅದರ ಕರ್ತೃ ನಾಸರನ ಬಲತೋಳಾಗುತ್ತಾನೆ!

ಮೂರನೆಯದು, ಖಾಂದರ್ ಚರಖಾ! ಅದನ್ನು ಆತನ ಅನುನಾಯಿ ರಚಿಸಿದ್ದು ತಿರುಪತಿಯಲ್ಲಿ ಕುಳಿತು ಆ ದೇವರ ನೈವೇದ್ಯವನ್ನು ಈ ಚರಖಾದಿಂದ ನೂತರೆ ನೋಡಿ ಕಂಬಳಿ ಮಿಷನ್ನುಗಳೆಲ್ಲಾ ದಿವಾಳಿಯಾಗುತ್ತವೆ. ಅಷ್ಟು ಬಿಸಿ ಅದರ ವ್ಯಾಪಾರ! ಆ ಕರ್ತೃ ಇಹದಲ್ಲೇ ಸ್ವರ್ಗವನ್ನು ದ್ವಿಶರೀರನಾಗಿ ಪಡೆಯುತ್ತಾನೆ.

ಅದಕ್ಕೋಸ್ಕರವೇ ನಾನೂ ಕೊರವ ಚಕ್ರದ ತಯಾರಿಕೆಗೆ ಕೈ ಹಾಕಿದ್ದೇನೆ. ಅಂಬರಕ್ಕೆ ೨ ಕೋಟಿ ಬಂಜಕ್ಕೆ ೧ ಕೋಟಿ. ಖಾಂದರಕ್ಕೆ $\frac{1}{2}$ ಕೋಟಿ. ದೆಹಲಿಯಲ್ಲಿ.

ಕೊರವ ಚಕ್ರಕ್ಕೆ ೧೦ ಲಕ್ಷ ಸಿಕ್ಕರೆ ಸಾಕು ! ಅಷ್ಟನ್ನೂ ಆಕೆಯ ಕೈಲಿ ಕೊಟ್ಟು, ವಿವಾಹ ವಿಚ್ಛೇದನವನ್ನು ನವ ಕಾನೂನಿನ ಪ್ರಕಾರ ಪಡೆದು, ಟೀನ್ ಸಿಂಗನನ್ನು ಹಿಂದುಳಿಸಿ ಗೌರೀಶಂಕರವನ್ನು ಜೈ ಶಂಕರ್ ಎನ್ನುತ್ತಾ ಹತ್ತುತ್ತೇನೆ! ಎಂದ.

ಆಗ ಮರಗೆಲಸದ ಮೇಜಿನ ಕೆಳಗಿದ್ದ ಆ ಆಲ್ಸೇಷಿಯನ್ ಹುಂಯ್ ಗುಟ್ಟಿತು.

ಆಗ ಅರ್ಥವಾಯಿತು ಡ್ರಾಯಿಂಗ್ ರೂಮಿನ ದೃಶ್ಯ

ಇಬ್ಬರೂ ಮೂರು ಕಾಲೋಟದಿಂದ ಹೊರಬಿದ್ದು, ಎರಡೇ ಕ್ಷಣದಲ್ಲಿ ಸಮಾಧಾನದ, ಸಾತ್ವಿಕತೆಯ ಕ್ಲಬ್ಬಿನ, ವರಾಂಡಾವನ್ನು ಸೇರಿದೆವು !

ಮರಗೆಲಸಕ್ಕೆ ಹೋದೋನು ಮರಳಿ ಬಾರನೆ ! ಮೇನಕೆಯೊಡಗೂಡಿದವನು ತಿರುಗಿ ಬರಲಿಲ್ಲವೇ ಕೈ ಕೊಡವಿಕೊಂಡು !!



"ಉಸ್...ಲೋ, ಮದ್ರಾಸ್ ಮೆಯಿಲ್ ಆಟ ಬೇಡ ಕಣೋ....ಚಿಕ್ಕಬಳ್ಳಾಪುರ ರೈಲ್ ಆಟ ಆಡೋಣ....!"

# ಆಂತರಿಕ ಪತ್ರ

## ಸಂಪಾದಕರಿಗೆ

---

ಸಂಪಾದಕರಿಗೆ, ಕ. ಪಾಪಯ್ಯನು ಮಾಡುವ ಅನಂತ ವಂದನೆಗಳು.

ಸ್ವಾಮಿಾ! ತಾವು ಅನುಭವಜ್ಞರು, ಕೆಟ್ಟುದು ಒಳ್ಳೆಯದನ್ನು ಕಂಡವರು, ಕವಿ ಹೃದಯಿಗಳು, ಕಪಿ ಸ್ವಭಾವದವರು. ನನಗೆ ಈಗ ಬಂದಿರುವ ಕಷ್ಟಸಮಸ್ಯೆಗೆ ನೀವೇ ಧನ್ವಂತ್ರಿಗಳು ಎಂದು ಈ ಆಂತರಿಕ ಪತ್ರವನ್ನು ಬರೆದಿದ್ದೇನೆ. ದಯುವಿಟ್ಟು ನನಗೆ ಮಾರ್ಗ ತೋರಬೇಕು. ನನ್ನನ್ನು ಈ ಅಪಕ್ರಾಂತಿಯಿಂದ ಕಾಪಾಡಬೇಕು. ಹೋದಸಾರಿ ಚವತಿ ಚಂದ್ರನನ್ನು ನಾನು ನೋಡಲೆ ಇಲ್ಲ ಎಂಬ ಭರವಸೆಯನ್ನೂ ಕೊಡುತ್ತೇನೆ.

ವಿಷಯ ಇಷ್ಟೇ!! ಎರಡೇ ಮಾತಿನಲ್ಲಿ ಹೇಳುತ್ತೇನೆ.

ಶ್ರೀಮಂತ ಶ್ಯಾನುಭೋಗ ಕಪ್ಪಣ್ಣನವರ ಮೊದಲ ಹೆಂಡತಿಯ ಒಬ್ಬನೇ ಮಗ ನಾನು. ನಮ್ಮ ಚಿಕ್ಕಮ್ಮನಿಗೆ ೧೬ ಮಕ್ಕಳಿವೆ. ಆದರೂ ಹೆಸರಿನ ಮೋಹಕ್ಕೆ ಗಾಂಭೀರ್ಯದ ಸಲುವಾಗಿ ಶ್ರೀಮಂತ ಶೇಕ್‌ದಾರ್ ತಿಪ್ಪಣ್ಣನವರು ಅವರ ಒಬ್ಬಳೇ ಮಗಳಿಗೆ, ನಾನು ೧೨ ರೂಪಾಯಿ ಪರೀಕ್ಷೆಗೆ ಕಟ್ಟಿದಾಗಲೇ, ನನ್ನ ಕೈಲೇ ತಾಳಿ ಕಟ್ಟಿಸಿದರು. ಉತ್ತರ ನಾನು ಬಿ. ಎ. ಪ್ಯಾಸುಮಾಡುವ ಹೊತ್ತಿಗೆ ವಿದ್ಯಾಭ್ಯಾಸದ ಖರ್ಚೆಲ್ಲಾ ತಿಪ್ಪಣ್ಣನವರದೇ ಆಗಿತ್ತು. ಆ ವೇಳೆಗೆ ನನಗೆ ಮೂರು ಮಕ್ಕಳಿದ್ದುವು. ನನ್ನ ಹೆಂಡತಿಯು ಎರಡೇ ಹೆರಿಗೆಗಳಲ್ಲಿ. ಅಂದಮೇಲೆ ನಾನು ಪದವೀಧರನಾದ ಕೂಡಲೇ, ಪಹರಿಗೆ ಹೋಗಿ ಅಬ್ಕಾರಿ ಅಧಿಪತಿಯೊಬ್ಬನಲ್ಲಿ ಕಾರಕೂನನಾಗಿ ತಿಂಗಳಿಗೆ ೬೦ ಪಗಾರದ ಮೇಲೆ ಸೇರಿಕೊಂಡೆ. ಊರಾಚೆ ಮಾರಿಗುಡಿಯ ಪೂಜಾರಿಯ ಔಟ್‌ಹೌಸನ್ನು ೧೦ ರೂಪಾಯಿ ಬಾಡಿಗೆಗೆ ತೆಗೆದುಕೊಂಡು, ಸಂಸಾರ ಹೂಡಿದೆ. ನಮ್ಮ ಮಾವನವರು ಮಗಳನ್ನು ಕರೆತಂದು ಬಿಡಲು ಹಳ್ಳಿಯಿಂದ ಬಂದು ಪಹರಿನ ಹೋಟಲಿನಲ್ಲಿ ಇಳಿದುಕೊಂಡು ಒಳ್ಳೆಯ ಘಳಿಗೆಯಲ್ಲಿ ಮಗಳನ್ನು ನನ್ನ ಮನೆಗೆ ಟಾಕ್ಸಿಯಲ್ಲಿ ಕರೆತಂದರು. ಟಾಕ್ಸಿಯಲ್ಲೇ ಕೂತು ಸಾಮಾನು, ಮಗಳನ್ನೂ, ನನ್ನ ಕುಟೀರಕ್ಕೆ ಕಳಿಸಿ, ಟಾಕ್ಸಿಯಲ್ಲೇ ನಾನು ಮಾಡಿ ತಂದು ಕೊಟ್ಟ ಕಾಫಿಯನ್ನು ಕುಡಿದು ಹೋದರು.

ಮಾರನೆಯದಿನ ಮಗಳ ಭಾರ ತಪ್ಪಿತಲ್ಲಾ ಎನ್ನುವ ಸಂತೋಷಕ್ಕೇನೋ, ಒಂದು ಹೊಸಾ ಹೊಸ ಬೈಸಿಕಲ್ಲನ್ನು, ಮಾರ್ವಾಡಿ ಅಂಗಡಿಯಲ್ಲಿ ಕೊಂಡು, ನನಗೆ

ಕಳಿಸಿಕೊಟ್ಟು ತಾವು ತಮ್ಮ ಶ್ರೀಮಂತ ಹಳ್ಳಿಗೆ ಬಿಜಯಂಗೈದರು. ಹೆಸರಿಗೆ ಶ್ರೀಮಂತ ತಂದೆಯಿದ್ದರೂ ಬಡವನಾದ ನನಗೆ ಈ ಶ್ರೀಮಂತ ಮಾವನವರು ಪ್ರತ್ಯಕ್ಷ ದೇವರಾಗಿಯೇ ಇದ್ದರು. ಅಂತೆಯೇ ವರ ಕೊಟ್ಟಿದ್ದರು. ನಾನೂ ದೇವರಿಗೆ ಕಣ್ಣೀರ ಹಣತೆಯನ್ನು ಭಕ್ತಿಯಿಂದ ಹಚ್ಚಿಟ್ಟೆ.

ಇದಾದ ನಾಲ್ಕುದಿನಗಳಾದಮೇಲೆ ನಮ್ಮ ಧಣಿಯ ಕಚೇರಿಯಿಂದ ಅಂದಿನ ಲೆಕ್ಕಪತ್ರವನ್ನೆಲ್ಲಾ ಸರಿದೂಗಿ, ಮೂರುತರಹ ಲೆಕ್ಕ ಬರೆದು, ಒಂದು ಆತನಿಗೆ, ಒಂದು ವರಮಾನ ತೆರಿಗೆಯವನಿಗೆ, ಇನ್ನೊಂದು ಲೆಕ್ಕ ಅವನ ಹೆಂಡತಿಯ ಪರೀಕ್ಷೆಗೆ, ಈ ರೀತಿ ಬರೆದು ಮುಗಿಸಿ, ಆ ಬೈಸಿಕಲ್ಲು ಹತ್ತಿಕೊಂಡು ನನ್ನ ಮನೆಗೆ ರಾತ್ರಿ ಏಳರ ವೇಳೆಗೆ ಹೊರಟು ಬರುತ್ತಿದ್ದಾಗ, ಚಪ್ಪಲಿಯ ಮೊಳೆ ಎದ್ದು ಮುಂಗಾಲಪಾದವನ್ನು ಚುಚ್ಚಿತು. ಬೈಸಿಕಲ್ಲಿನಿಂದ ಇಳಿದು, ಬೈಸಿಕಲ್ಲನ್ನು ಲಾಂದ್ರದ ಕಂಭದ ಕೆಳಗೆ ಒರಗಿಸಿ, ಚಪ್ಪಲಿ ಮೊಳೆಯನ್ನು ತಟ್ಟಲು ಕಲ್ಲು ಹುಡುಕಿದೆ.

ಆ ವೇಳೆಗ ಒಬ್ಬ ಗಡ್ಡದಾತ ಎದುರು ತರಕಾರಿ ಅಂಗಡಿಯಿಂದ ಕೆಟ್ಟಕೆಟ್ಟದಾಗಿ ಕೂಗುತ್ತ, ಕೋಲು ಝಾಡಿಸುತ್ತಾ ಓಡಿಬಂದ. ಅವನ ಎದುರಿಗೆ ಒಂದು ದನ ದೆವ್ವ ಹಿಡಿದಂತೆ ಓಡುತ್ತಿತ್ತು. ಅವನ ಅಂಗಡಿ ತರಕಾರಿಗೆ ಬಾಯಿ ಹಾಕಿರಬೇಕು, ಅವ ರೇಗಿ ಓಡಿಸುತ್ತಿದ್ದಾನೆ, ಅವನ ಕ್ಯಾಕರಿಕೆ ಭಾಷೆಯಲ್ಲಿ, ಎಂದು ಅರ್ಥ ವಾಯಿತು. ಅಷ್ಟರಲ್ಲಿ ಆ ಮತಿಗೆಟ್ಟ ದನ ರಸ್ತೆಯಂಚಿನಲ್ಲಿದ್ದ ನನ್ನ ಬೈಸಿಕಲ್ಲಿನ ಹತ್ತಿರಕ್ಕೇ ಬಂತು. ನನಗೆ ಆಶ್ಚರ್ಯ! ಅವಸರದಲ್ಲಿ ಈ ದನ ಬೇಗ ಓಡಿಹೋಗಲು ಈ ಬೈಸಿಕಲ್ಲನ್ನೇ ಹತ್ತಿಹೋಗುತ್ತದೆಯೋ ಎಂದು! ಆದರೆ ಆ ದನದ ಬುದ್ಧಿಯದು, ತಾನೋಡುವ ರಭಸದಲ್ಲಿ ಬೈಸಿಕಲ್ಲನ್ನೂ ಕಾಣದೆ ಅದನ್ನೂ ಒದ್ದುಕೊಂಡು ಓಡಿ ಹೋಯಿತು. ಗಡ್ಡದಾತ ಬೆವರುತ್ತಾ ಹಿಂತಿರುಗಿದ.

ನಾನು ಚಪ್ಪಲಿಯನ್ನು ಜೇಬಿನಲ್ಲಿಟ್ಟುಕೊಂಡು ಬೈಸಿಕಲ್ಲಿನ ಹತ್ತಿರ ಹೋದೆ. ದುಂಡಾಗಿರಬೇಕಾದ ಚಕ್ರ, ವಕ್ರವಾಗಿತ್ತು. ಎದುರು ತೋರುವ ಹಿಡಿಯು ಸಿಂಥೆ ಘಟ್ಟದ ದೇವರಂತೆ, ಹಿಂದುಮುಂದಾಗಿತ್ತು. ಚಲನಕಾರೀ ಸರಪಳಿಯು ಕಡಿದು ಬಿದ್ದಿತ್ತು. ಅದರ ಮುಂಚಕ್ರವನ್ನು, ಹಿಂತಿರುಗಿದ ಹಿಡಿಯಿಂದ ಮೇಲಕ್ಕೆತ್ತಿಕೊಂಡು ಬರಿಕಾಲಿನಲ್ಲಿ ಎರಡು ಗಂಟೆ ನಡೆದು ನುನೆ ಸೇರಿದೆ. ದಾರಿಯುದ್ದಕ್ಕೂ ಆ ಬೈಸಿಕಲ್ಲಿನ ಹಿಂಚಕ್ರ ತಿರುಗುವಾಗಲೆಲ್ಲಾ ಒಂದು ರೀತಿಯ ಕಿಯ್ಯೋ, ಕುಂಯ್ಯೋ! ನಿನಾದವನ್ನು ಹೊರಸೂಸುತ್ತಿತ್ತು.

ಮನೆ ಸೇರುವಾಗ ಮನೆಯ ಹೊರಬಾಗಿಲಲ್ಲೇ ನನ್ನ ಧರ್ಮಪತ್ನಿ ಕಾತುರತೆ ಯಿಂದ ಕಾದುಕೊಂಡಿದ್ದುದನ್ನು ನೋಡಿದೆ. "ಯಾಕೆ? ಈ ಛಳಿಯಲ್ಲಿ ಇಲ್ಲಿ ನನ್ನ ಬರುವಿಕೆಗೆ ಕಾದಿದ್ದಿ! ಈ ಬೈಸಿಕಲ್‌ಗೆ ಹೀಗೆ ಹೀಗೆ ಅಪಘಾತವಾಯ್ತು. ಅದರಿಂದ ಬರುವುದು ವೇಳೆಯಾಯ್ತು. ತುಂಬಿದಾಂಗಿ! ನಿನ್ನ ಈ ಪ್ರೇಮ ಪ್ರದರ್ಶನಕ್ಕೆ ನಾನು ಸುಸ್ತಾದೆ" ಎಂದು ಹೇಳಿ ಆ ಬೈಸಿಕಲ್ಲನ್ನು ಅನಾಮತ್ತು ಎತ್ತಿ ಉಳಿದಿದ್ದ

ಶಕ್ತಿಯಿಂದ ಮೆಟ್ಟಲು ಹತ್ತಿ ಮನೆಯೊಳಕ್ಕೆ ಸಾಗಿಸಿದೆ. ಅಲ್ಲೇ ಇದ್ದ ಹರಿದ ಚಾಪೆಯಮೇಲೆ ಕೂತೆ.

ಕೋಕಿಲಕಂಠೆ ನನ್ನ ಹೆಂಡತಿ ಆಗ ಬಾಯ್ತೆರದು ಹೇಳಿದಳು. "ಏನೋ ಕೆಟ್ಟ ಶಬ್ದವಾಯ್ತು ಅಂದ್ರೇ! ನಿದ್ರೆ ಮಾಡುತ್ತಿದ್ದೆ. ಎಚ್ಚರವಾಯ್ತು. ಎದ್ದು ಬಂದೆ ಪಕ್ಕದ ಮಾರೀಗುಡಿಯಲ್ಲಿ ಈ ಹೊತ್ತಿನಲ್ಲಿ ಯಾರು ಬಲಿಕೊಡುತ್ತಿದ್ದಾರೆ ಎಂದು ಕೊಂಡೇ ಬಾಗಿಲು ತೆರೆದೆ. ನೀವು ಬಂದಿರಿ. ಅಲ್ಲಾ ಅಂದ್ರೇ! ನಮ್ಮ ತಂದೆ, ಅಷ್ಟು ಉದಾರತೆಯಿಂದ, ನಿಮ್ಮ ಕಷ್ಟ ಕಡಿಮೆಯಾಗಲೆಂದು ನಿಮಗೆ ಈ ಬೈಸಿಕಲ್ಲನ್ನು ಕೊಟ್ಟರೆ, ನೀವು ಇಷ್ಟು ಅಲಕ್ಷ್ಯದಿಂದ ಅದನ್ನು ನಾಲ್ಕೇ ದಿನದಲ್ಲಿ ದನದ ಮೇಲೆ ನಡೆಸಿ ಹೀಗೆ ಮಾಡಬಹುದೇ? ನಮ್ಮ ಪ್ರೀತಿಪಾತ್ರ ತಂದೆಯವರು ಕೊಟ್ಟಿದ್ದೆಲ್ಲಾ ನಿಮಗೆ ಹೀಗೇ ಅಲಕ್ಷ್ಯ ಎಂದು ನಿದ್ರೆಗಣ್ಣಿನಲ್ಲಿ ಆಕಳಿಸುತ್ತಾ ಹೇಳಿ, ತಾನು ಮಲಗಿಕೊಂಡು ಗೊರಕೆಗೆ ಆರಂಭಿಸಿದಳು.

ನಾನೂ ಹೊರಬಾಗಿಲನ್ನು ಹಾಕಿ ಆ ಚಾಪೆಯಮೇಲೆ ಹಿಂದಿದ್ದ ಟ್ರಂಕನ್ನೊರಗಿ ಕೊಂಡು, ಅಂಗೈಯನ್ನು ಹೊಟ್ಟೆಯಮೇಲೆ ತಣ್ಣಗೆ ಅದುಮಿಟ್ಟು, ಬಿದ್ದುಕೊಂಡೆ. ನಿದ್ರೆ ಬರಲಿಲ್ಲ. ಕಾರಣ, ಹೆದರಿಕೆ. ಮುಂಬರುವಿನ ಕಾತುರ. ನನ್ನ ಧರ್ಮಪತ್ನಿ ನನ್ನ ಬಾಳದೇವರಾದ ಅವಳ ತೀರ್ಥರೂಪರಿಗೆ "ನೀವು ಕೊಟ್ಟ ಬೈಸಿಕಲ್ಲನ್ನು ಅಜಾಗರೂಕತೆಯಿಂದ ನಿಮ್ಮ ಅಳಿಯಂದಿರು ಹೀಗೆ ಹಾಳುಮಾಡಿದರು" ಎಂದು ನಾಳೆ ಬೆಳಗ್ಗೆ ಕಾಗದ ಬರೆದುಹಾಕಿದರೆ, ಆತ ನನ್ನಮೇಲೆ ರೇಗಿದರೆ, ಆತನಿಗೆ ಯಥಾರ್ಥವು ಅರ್ಥವಾಗುವಂತೆ ಹೇಗೆ ಮಾಡಲಿ, ಎಂಬ ಕಾತುರವೇ ನನ್ನ ಆಯಾಸ ವನ್ನೂ ಮೆಟ್ಟಿ ನನ್ನ ನಿದ್ರಾಭಂಗಮಾಡಿತು.

ನತದೃಷ್ಟ ನಾನು. ಅಂತಹವರ ಹೊಟ್ಟೆಯಲ್ಲಿ ಹುಟ್ಟಿ, ಇಂತಹವರ ಮನೆಯ ಸಂಬಂಧವನ್ನು ಬೆಳೆಸಿ, ಈ ರೀತಿ ಹೀನಾಯಮಾನವಾಗಿ, ಪೋಸ್ಟಾಫೀಸಿನ ಲೇಖನಿಯಂತೆ ಜೀವನನೌಕೆ ನಡೆಸುತ್ತಿದ್ದೇನೆ. ಈ ಸಮಸ್ಯೆಗೆ ಮುಂಜಾಗ್ರತೆ ತೆಗೆದುಕೊಳ್ಳಲು ತೋಚಲಿಲ್ಲ.

ಆದಕಾರಣ ೧ ಗಂಟೆಗೆ ಎದ್ದು, ಆ ಮುರಿದ ಬೈಸಿಕಲ್ಲಿನ ಲಾಂದ್ರ ಹಚ್ಚಿ ಆ ಮಸುಕು ಬೆಳಕಿನಲ್ಲಿ ನಿಮಗೆ ಈ ಆಂತರಿಕ ಪತ್ರ ಬರೆದಿದ್ದೇನೆ. ನೀವು ನನ್ನ ಸಮಸ್ಯೆಗೆ ಸರಿಯಾದ ಉತ್ತರ ದಯೆಯಿಟ್ಟು ಕೊಡುವಿರಾ?

ನಿಮ್ಮ ಸೇವಕ,

ಪಾಪಿ.

[ಬಲು ಸುಲಭಾ ಪಾಪಯ್ಯಾ! ನಿನ್ನ ಸಮಸ್ಯೆಗೆ ಉತ್ತರ. ಬೆಳಗಿನಝಾವ ೫ ಗಂಟೆಗೆ ಎದ್ದು ಪಕ್ಕದ ಮಾರೀಗುಡಿಯ ತೋರುಗಂಭದ ಅಡಿ ತಲೆ ಇಟ್ಟು ಕುಳಿತುಕೋ. ದೇವತೆಗೆ ನೈವೇದ್ಯವಾಗಿ ನಿನ್ನ ಕಷ್ಟಸಮಸ್ಯೆಗಳು ಪರಿಹಾರ ವಾಗುವುವು. —ಸಂ.]

 

# ಲಂಚ-ಕೈಗೆ-ತಾ!



ಇಂದಿನ ಸಮಸ್ತ ಸಮಾಜದಲ್ಲಿ ಸರ್ವವ್ಯಾಪಿಯಾದುದು_ಲಂಚ ಹಿಂಗೈಗೆ ತಾಕಿ ಜೀವನವನ್ನೇ ಬೆಳಗುವ ಧಿಃಶಕ್ತಿ—ಲಂಚ. ಅಂತಹ ದಿವ್ಯ ಶಕ್ತಿಯನ್ನು ಕುರಿತು ಕುಹ ಕವಿಯು ಈ ರೀತಿ ಹಾಡಿರಬಹುದು, ಲಂಚ ಸಿಗದ ಕಾರಣ
" ಅಲ್ಲವೇ ? "
[ಹೌದು ; ಸಂ]

ಮನಸ್ಸಿನಲ್ಲಿ ಹೊಳೆದವನೆ
ಕನಸಿನಲ್ಲಿ ಬೆಳೆದವನೆ
ಜೀವನವ ಬೆಳಗುವವನೇ
ಎಲ್ಲಿರುವೆ ಬಾ! ॥ ೧ ॥

ಗೆಲುವಿನಲ್ಲಿ ಮೂಡಿರುವಿ,
ಒಲವಿನಲ್ಲಿ ತಾಕಿರುವಿ
ಜಗದ ರೂಪ ತಾಳಿರುವಿ
ಕೈಗೆ ಕೈಯ ತಾ!
ಹಿಂಗೈಗೆ ಕೈಯ ತಾ! ॥ ೨ ॥

ಕಳ್ಳ ಕೊಲೆಗೆ ಬಿದ್ದಲಾಗ
ಸುಳ್ಳು ನಿಜಕೆ ತಾಕಿದಾಗ
ಸಾಕ್ಷಿ ಕೆರಳಿ ಕೂಗಿದಾಗ
ಬಂದವನೆ ಬಾ! ॥ ೩ ॥

ಗಂಡು ಹೆಣ್ಣು ವರಿಸುವಾಗ
ಬೀಗ ಬೀಗರು ಕೂಡಿದಾಗ
ಜೀವಸೆಲೆಯ ತೋಡುವಾಗ
ಬಹನೆ ಕೈ ತಾ! ॥ ೪ ॥

ಹೂವು ಅರಳಿ ನಗುತಲಿರೆ
ತನ್ನ ಬಸಿರ ನೆನೆಯುತಿರೆ
ತುಂಬಿ ಬಂದು ಸಂಗಡಿಸಿರೆ
ಮಧುವ ನಿತ್ತವನೆ ಬಾ ॥ ೫ ॥

ಬೆಣ್ಣೆ ಕೈಯ ಹೊಸಿಯುತಿರೆ
ಕಣ್ಗೆ ಸುಣ್ಣ ಬೀಳುತಿರೆ
ಆದ ಬಿಲ್ಲ ಕೊಡುತಲಿರೆ
ಚಾಚಿದ ಕೈ ತಾ ॥ ೬ ॥

---

# ರೀತಿಯ ಕತೆಗಳು

ಅರಿತವರಿಗೆ

## ಒಂಟೆಗಳು—ಸಿಂಹ

ಒಂದು ಮರಳು ಕಾಡಿನಲ್ಲಿ ನಾಲ್ಕು ಒಂಟೆಗಳು ಸುಖವಾಗಿ ಸಂಸಾರಮಾಡಿಕೊಂಡಿದ್ದುವಂತೆ. ನಮ್ಮಷ್ಟು ಅಂದವಾದವರು, ನಮ್ಮಷ್ಟು ಚೆಂದವಾದವರು, ಯಾರಿರುವರು ಈ ಲೋಕದಲ್ಲಿ ಎಂದು ಒಂದು ಗಂಡು ಒಂಟೆ ಒಂದು ಹೆಣ್ಣು ಒಂಟೆಗೆ ಹೇಳಿಕೊಳ್ಳುತ್ತಾ ಸುಖವಾಗಿ ಸಂಸಾರ ಮಾಡಿಕೊಂಡಿದ್ದುವಂತೆ.

ಮುತ್ಸಂಜೆಯ ಕಾಲದಲ್ಲಿ ಆ ಮರಳುಗಾಡಿನಲ್ಲಿ ಒಂದು ಸಿಂಹ ಬಂತಂತೆ. ಘರ್ಜಿಸಿತಂತೆ. ಆ ಶಬ್ದವನ್ನು ಕೇಳಿ, ಆ ಕೋರೆಹಲ್ಲುಗಳನ್ನು ನೋಡಿ, ಆ ಆರ್ಭಟವನ್ನು ಕಂಡು ಆ ಸಿಂಹ ಹೋದ ಹಾದಿಯಲ್ಲಿ ಇವು ಕಾಣಿಸಿಕೊಳ್ಳಲೇ ಇಲ್ಲವಂತೆ.

ಸಿಂಹ ಭುಜ ತಟ್ಟಿಕೊಂಡಿತಂತೆ. ಇಷ್ಟೆತ್ತರ ಇವೆ ಈ ಒಂಟೆಗಳು. ಅವರ ಮನೆಯಲ್ಲೇ ನನ್ನ ಕಂಡು ಈ ರೀತಿ ಹೆದರಿ ಹೇಡಿಗಳಾಗಿವೆ; ಎಂತಹ ಹೆಣ್ಣಾ ಪುಕ್ಕಿ ಕಳ್ಳೇಕಾಯಿಗಳಿವು ಎಂದು ರಾತ್ರಿಯೆಲ್ಲಾ ತಾನೇ ತಾನಾಗಿ ಮೆರೆಯಿತಂತೆ.

ಬೆಳಗಾಯ್ತಂತೆ.

ಒಂಟೆಗಳು ದೂರದಿಂದ ನೋಡಿದುವಂತೆ. ಮರಳಿನಲ್ಲೇ ಸಮಾಧಿಯಾದಂತೆ ಮಲಗಿದ್ದ ಸಿಂಹವನ್ನು ನೋಡಿದುವಂತೆ. ಎಲ! ಎಲಾ! ಈ ಸಿಂಹಕ್ಕೇನೇ ನಾವು ನಿನ್ನೆ ರಾತ್ರಿ ಮುಸಗತ್ತಲಿನಲ್ಲಿ ಹೆದರಿ ಹಿಂಕಾಲ ತೆಗೆದುದು? ಎಂತಹ ಮೂಢ ಮತಿಗಳು ನಾವು? ನಾವು ನಾಲ್ವರು ಒಟ್ಟಿಗೆ ಮೇಲೆ ಬಿದ್ದರೆ ಸಿಂಹವು ಫಢ್ಚ ಖಂಡಿತ! ಹಾಗೇ ಮಾಡೋಣ ಎಂದು ಮತ್ತವೇರಿದ ಮುದಿ ಸಿಂಹದಮೇಲೆ ಒಮ್ಮೆಲೇ ಬಿದ್ದು ನೆಟ್ಟಗೆ ಎದೆಯುಮೇಲೆ ಒದ್ದುವಂತೆ. ಒಂಟೆಯ ಹಿಂಗಾಲು ಒದೆತ ಬಲು ರಭಸಯುತವಂತೆ. ರಾಸಭಕ್ಕಿಂತಲೂ ರಸಭರಿತವಂತೆ.

ನೋವಿನಿಂದ ಎಚ್ಚೆತ್ತ ಸಿಂಹ ಒಮ್ಮೆ ಘರ್ಜಿಸಿತಂತೆ. ನಾಲ್ಕೂ ಒಂಟೆಗಳು ಕೇಕೆ ಹಾಕುತ್ತ ನಕ್ಕುವಂತೆ, ದಿಟ್ಟತನದಿಂದ ಸುತ್ತಲೂ ನಿಂತು.

ಮರಳುಗಾಡಿನ ಮರಳುದಿಣ್ಣೆಗಳೊಂದೊಂದೂ ಸಾಕ್ಷಿಯಂತೆ.

ಏಳಹೋದ ಸಿಂಹದ ಕಾಲು ಕುಸಿಯುತ್ತಿತ್ತಂತೆ. ನೆಲದಿಂದ ಬಾಲವನ್ನೂ ಮೇಲಕ್ಕೆತ್ತಲು ಕಷ್ಟವಾಯಿತಂತೆ, ಆ ಬಾಲದ ತುದಿಯ ಗೊಂಚಲಿನ ಭಾರದಿಂದ!—

* * *

ಕಾಲಪುರುಷನ ಸರ್ಕಸ್ಸಿನ ಸಿಂಹವಂತೆ ಅದು. ಕಾಲಪುರುಷನ ಸರ್ಕಸ್ಸಿನ ಇತರ ಧೀರರು ಬಂದು, ಭಲೇ! ಸಿಂಹ! ಎಷ್ಟು ಚೆನ್ನಾಗಿ, ಜೋರಾಗಿ, ಅರ್ಭಟದಿಂದ ಘರ್ಜಿಸಿದೆ? ಷಹಭಾಷ್! ಎಂದು ಕವೆಗೋಲಿನಿಂದ ಎತ್ತಿ ನಿಲ್ಲಿಸಿ ಸಿಂಹವನ್ನು ಹೊಗಳಿ ಕರೆದುಕೊಂಡು ಹೋದರಂತೆ. "ನೀನು ಮರಳುಗಾಡಿನಲ್ಲಿ ಬಿದ್ದರೂ ಅದೂ ಒಂದು ವರಸೆ ಜಟ್ಟಿ!" ಎಂದು ಹಿಮ್ಮೇಳದ ದನಿಗೂಡಿಸುತ್ತಿದ್ದರಂತೆ.

* * *

ಒಂಟೆಗಳು, "ಬೆಳಗಾಯ್ತು! ಇನ್ನೇತರ ಭಯ! ನಮಗೆ ನಮ್ಮ ಮನದ ಹೆದರಿಕೆಗಳೇ ನಮ್ಮ ಆಜನ್ಮ ಶತ್ರುಗಳು ಎಂದು ಈಗ ತಿಳಿದಿದೆ—ಇನ್ನು ನಮ್ಮದೇ ರಾಜ್ಯ; ನಮ್ಮದೇ ದರ್ಬಾರ್; ನಾವೇ ನಾವು; ನಾವು ನಮ್ಮನ್ನು ಅರಿಯಲು ಇದೇ ಮುಹೂರ್ತ" ಎಂದು ಸಂತೋಷಪಟ್ಟುವಂತೆ; ಹಿಗ್ಗಿದುವಂತೆ.

ಆಗ ನೆರೆಹೊರೆಯ ಮರಳ್ಗಾಡಿನ ಒಂಟೆಗಳೆಲ್ಲಾ ಬಂದು "ಥೇ! ಥೇ! ಈ ಸಿಂಹದಿಂದಲೇ ನೀವು ನಿಮ್ಮ ಸ್ವಾವಲಂಬನೆಯನ್ನು ಕಲಿತಿದ್ದೀರಿ! ಅದೂ ಬದುಕಿರಲಿ, ನೀವೂ ಬದುಕಿರಿ; ನಾವೆಲ್ಲರೂ ಬದುಕಿರೋಣ! ಎಂದು ಸಂತಸದ ಸಮಾಧಾನದ ಹಿತನುಡಿಯನ್ನಾಡಿತಂತೆ.

* * *

ಆಗ ಮರಳ್ಗಾಡಿನಲ್ಲಿ ಮಳೆ ಬಿತ್ತಂತೆ. ಸುಭಿಕ್ಷದೇಶ ಮೊದಲಾಯ್ತಂತೆ. ಅಹಂಕಾರದ ಮಟ್ಟವಾಯ್ತಂತೆ.

* * *

[ನಾಸರ್‌ಮೆ; ನಸ್.]
ಬಚ್ಚ.

---

# ಲಂಡನ್ನಾ ್ಯಯು

---

ಮಸಾಲೆ ದೋಸೆಯು ಮುರಾರಿ ರಾಯನ
ಹೋಟಲಗೆರಗಿತು ಗ್ರಹಚಾರ
ಗಿರಾಕಿ ಸಂಘವ ಮಾಡುತ ಜನರು
ನುಗ್ಗೇಬಿಟ್ಟರು ಹೋಟಲಿಗೆ....
ಊರಿನ ಜನಗಳಿಗಾಗಿಯೆ ಅಲ್ಲವೆ
ಚಟ್ಣಿ ದೋಸೆಯು ತಯಾರಿಕೆ?....
"ಕಪ್ಪೂ ಸಾಸರು ನಿನ್ನವೆ ಆದರು
ಮಾಣಿಗಳೆಲ್ಲ ನಮ್ಮವರು!
ದೋಸೆಯ ಹುಯ್ಯೋ! ಚಟ್ಣಿಯ ನರೆಯೊ!
ಬಾರೊ! ತಾರೊ! ಕೂಗಿದರು.
ಬಿಸಿ ಬಿಸಿ ಬೇಯಲಿ, ದೋಸೆಗಳೆಲ್ಲ
ಒಲೆಯೂ ಉರಿಯಲಿ ಭಗಭಗನೆ!
ಚುರು ಚುರುಕೆನ್ನಲಿ ಮೆಣಸಿನ ಖಾರ
ಠಣ ಠಣ ಎನ್ನಲಿ ತಟ್ಟೆಗಳು!
ತಂಡ ತಂಡದಲಿ ತಿಂಬರು ತೇಗುತ
ಕಂಡ ಕಂಡವರ ಕರೆಯುತಲಿ.
ಬಿಲ್ಲನು ಬರೆಯೊ ಹಿಂದಿನ ರೇಟಲಿ
ಎನ್ನುತ ರಾಯನ ಪೀಡಿಪರು
ಮುರಾರಿ ರಾಯನ ಕಣ್ಣಿಗೆ ಅವರು
ಕಿಲುಬು ಕಾಸನೂ ಕಾಣಿಸದೆ
ಬಾರೊ! ಗಿರಾಕಿ ಫಂಡು ಕಚೇರಿಗೆ
ಅಲ್ಲಿಗೆ ಪಾವತಿ ಹಣವೆಲ್ಲ!
ಮುರಾರಿ ರಾಯನು ಗೊಣಗಿದನೆಂದರೆ
ಬೆಂಕಿಯನಿಡುವರು ಹೋಟಲಿಗೆ
ಎಣ್ಣೆಯ ಡಬ್ಬ, ಬೆಂಕಿಯಕಡ್ಡಿಯ
ನಿಟ್ಟೇ ಇರುವರು, ಬಾಗಿಲಲಿ.

— ಕಾಮತ್.

---

# ಅಕ್ಟೋಬರ್ ಎರಡು !

ರಾಷ್ಟ್ರಪಿತ ಪೂಜ್ಯ ಬಾಪುಜೀಯವರ ಜನ್ಮದಿನ !

ನಮ್ಮ ಕೆಂಚುರಿ ಕ್ಲಬ್ಬಿನಲ್ಲಿ ಆ ಕೀರ್ತಿಶೇಷನ ಜನ್ಮದಿನೋತ್ಸವದ ಆಚರಣೆಯನ್ನು ರಸವತ್ತಾಗಿ ಅದ್ಧೂರಿಯಾಗಿ ಆಚರಿಸಬೇಕೆಂದು ಒಮ್ಮತದ ನಿರ್ಣಯ ಕಾರ್ಯವಾಹ ಮಂಡಳಿಯಿಂದ ಅನುಮೋದಿಸಲ್ಪಟ್ಟಿತು. ಅದಕ್ಕಾಗಿ ವಿಧ ವಿಧ ರಂಗು ರಂಗಿನ ಸರಬರಾಜುಗಳೂ ಸಿದ್ಧಮಾಡಲ್ಪಟ್ಟುವು. ಅಕ್ಟೋಬರ್ ಒಂದರ ರಾತ್ರಿ ಕ್ಲಬ್ಬಿಗೆ ಶೃಂಗಾರ ಮಾಡಲು ಶುರುವಾಯ್ತು !

* * *

ಅಕ್ಟೋಬರ್ ಒಂದರ ರಾತ್ರಿ ಅಂತೋನಿ ಊಟಮಾಡುತ್ತಾ ತನ್ನ ಹೆಂಡತಿ ಕಿಲಾರಮ್ಮನಿಗೆ ಹೇಳಿದ "ನಾಳೆ ಬೆಳಿಗ್ಗೆ ೬ ಗಂಟೆಗೇ ನನ್ನನ್ನು ಎಬ್ಬಿಸಬೇಕು— ೬-೩೦ಕ್ಕೆ ಕ್ಲಬ್ಬಿನಲ್ಲಿ ಡ್ಯೂಟಿಗೆ ಹಾಜರಿರಬೇಕು. ೯-೩೦ಕ್ಕೆ ನನಗೆ ಬಿಡುಗಡೆ. ತಿರುಗಿ ಮಧ್ಯಾಹ್ನ ೪ ಗಂಟೆಗೆ ಬರಹೇಳಿದ್ದಾರೆ ರಾತ್ರಿ ಎಷ್ಟು ಹೊತ್ತೋ ಮನೆಗೆ ಬರುವುದು? ನೀನು ಕಾದಿರಬೇಡ ! ಅಲ್ಲೇ ಊಟಮಾಡಿಕೊಂಡು ಬರುತ್ತೇನೆ" ಎಂದು ಹಿಟ್ಟಿನ ಮುದ್ದೆಯನ್ನು ಮೀನಿನ ವಾಸನೆಯ ಸಾಂಬಾರಿನಲ್ಲಿ ಅದ್ದಿಕೊಂಡು ನುಂಗುತ್ತಾ ಹೇಳಿದ.

ಕಿಲಾರಮ್ಮನ ಮುಖ ಜೋತು ಬಿತ್ತು. "ಅಲ್ಲಾ ! ಅಂದ್ರೆ ! ನಾಳೆ ನಿಮ್ಮ ಹುಟ್ಟಿದ ದಿನ. ಮನೆಯನ್ನು ಮಧ್ಯಾಹ್ನ ಬಿಟ್ಟುಹೋಗಿ ಯಾವಾಗಲೊ ನಿಶಿರಾತ್ರಿ ಬರುತ್ತೇನೆ ಅಂತೀರಲ್ಲಾ !" ಆ ದಿನವಾದರೂ ನಾವಿಬ್ಬರೂ ಒಂದೇ ತಟ್ಟೆಯಲ್ಲಿ ಒಂದೇ ಮುದ್ದೆಯಿಂದ ತುಣುಕು ಆರಿಸಿಕೊಂಡು ತಿನ್ನಬೇಡವೇ! ನಾಳೆ ರಜಾ ತೆಗೆದು ಕೊಳ್ಳಿ ಅಂತ ಕೇಳಿಕೊಳ್ಳೋಣ ಎಂತಿದ್ದೆ ಈಗ ನೀವು ಹೀಗೆ ಹೇಳುತ್ತಿದ್ದೀರಿ !" ಎಂದಳು. ಬೇಗ ಒಳಕ್ಕೆ ಹೋಗಿ ಎರಡೇ ನಿಮಿಷದಲ್ಲಿ ಕಲಾಪತ್ತಿನ ಅಂಚಿನ ಕೆಂಗೊಡಲ ಸೀರೆಯನ್ನು ಉಟ್ಟುಕೊಂಡು ಬಂದು ನಿಂತು "ಈ ಹಳೇ ಸೀರೆಗೆ ಆ ಹಳೇ ಕಲಾಪತ್ತಿನ ಅಂಚನ್ನು ಹೊಸದಾಗಿ ಹೋದವಾರ ನಾನೇ ಹೊಲಿದು 'ರೆಡಿ' ಮಾಡಿದೆ, ನಿಮ್ಮ ಹುಟ್ಟು ಹಬ್ಬಕ್ಕೆ" ಎಂದೂ ಅಂದಳು

ಅಂತೋನಿ ಅಕ್ಟೋಬರ್ ಒಂದರಂದು ಕ್ಲಬ್ಬಿನಿಂದ ಮನೆಗೆ ಬರುವಾಗ್ಗೆ ೧೧ ಗಂಟೆಯಾಗಿತ್ತು. ಅಂದು ಕಾರ್ಯವಾಹ ಸಭೆಯಿದ್ದಕಾರಣ, ಅವರಿಗೆ ಇವನೇ

ಸರಬುರಾಜನಾದಕಾರಣ, ಮನೆಗೆ ಬರುವಾಗ ತೇಜಃಪುಂಜನಾಗಿದ್ದ. ಈ ಹೊಸ ಕಳೆಯನ್ನು ಕಂಡ, ಹೊಟ್ಟೆ ತುಂಬಾ ಉಂಡಿದ್ದ, ಗಂಡ ಹೆಂಡಿರ ಸಂವಾದ ನಡೆಯುತ್ತಿತ್ತು.

* * *

ಇದೆಲ್ಲಾ ಆದಾಗ.

* * *

ಬೆಳಿಗ್ಗೆ ೬ ಗಂಟೆಗೆ ಅಂತೋಣಿ ಎಚ್ಚತ್ತ. ಅದಾವುದೋ ಅವ್ಯಕ್ತ ಅಗೋಚರ ಶಕ್ತಿ ಅವನನ್ನು ಎಚ್ಚರಿಸಿತ್ತು. ಮಲಗಿದ್ದ ಕಂಬಳಿಯ ಮೇಲೆ ಕುಳಿತುಕೊಂಡ. ಜ್ಞಾನೋದಯವಾಯ್ತು. ಈ ದಿನ ಕ್ಲಬ್ಬಿಗೆ ೬-೩೦ಕ್ಕೆ ಹಾಜರಿರಬೇಕು ಎಂಬುದು ನೆನಪಾಯ್ತು. ಪಕ್ಕದಲ್ಲಿ ಕಿಲಾರಮ್ಮ ಇನ್ನೂ ಸಂತಸದ ಗಾಢನಿದ್ರೆಮಾಡುತ್ತಿದ್ದಾಳೆ. ಆಕೆಯನ್ನು ಎಚ್ಚರಿಸಲು, ಟೀ ಕುಡು, ಎನ್ನಲು ಬಾಯಿ ಬರಲಿಲ್ಲ. ತಾನೇ ಎದ್ದು ಎರಡು ಬಟ್ಟಲು ಟೀ ಮಾಡಿ ತಾನೊಂದನ್ನು ಕುಡಿದು, ಇನ್ನೊಂದನ್ನು ಒಲೆಯ ಮೇಲೆ ಮುಚ್ಚಿರಿಸಿ ಹೊರಡಲು ಸಿದ್ಧವಾಗಿ ಬರುತ್ತಾನೆ! ಕಿಲಾರಮ್ಮ ಇನ್ನೂ ನಗು ಮುಖದ ನಿದ್ರೆಯಲ್ಲೇ ಇದ್ದಾಳೆ. "ಎಂತಹ ಪುಣ್ಯವಂತ ನಾನು" ಎಂದುಕೊಂಡು ಅಂತೋಣಿ ಆಕೆಯನ್ನೆಬ್ಬಿಸದೆ ಆಕೆಯ ಮೊಗಕ್ಕೆ ಮೊಗ ತಾಕಿಸಿ ತಾನು ಕೆಲಸಕ್ಕೆ ಹೊರಟ. ಅವ ಹೊರಬಾಗಿಲು ಹಾಕಿದುದು ಯಾರಿಗೂ ಕೇಳಿಸಿರಲಿಕ್ಕಿಲ್ಲ.

ಕಿಲಾರಮ್ಮನಿಗೆ ಬಲು ಖುಷಿ! ಆಕೆ ೫-೩೦ಕ್ಕೆ ಎದ್ದು ಒಲೆ ಹಚ್ಚಿಸಿ, ತಿರುಗಿ ಬಂದು ಇವನ ಮೊಗಕ್ಕೆ ಮೊಗ ಕೊಟ್ಟು ಮಲಗಿದ್ದಳು. ನಿದ್ರೆ ಬಂದಂತೆ ನಟಿಸುತ್ತಿದ್ದಳು. ಇವ ೬ಕ್ಕೆ ಎದ್ದವ ಹಚ್ಚಿದ ಒಲೆಯ ತನಿಖೆ ಮಾಡಲಾರದೆ, ಟೀ ಮಾಡಿ ಅವಳಿಗೂ ಒಂದು ಬಟ್ಟಲನ್ನಿಟ್ಟು, ಶಬ್ದವಿಲ್ಲದೆ ಹೊರಬೀಳುವ ಮುನ್ನ ಮಾಡಿದುದೆಲ್ಲವನ್ನೂ ಆಕೆಯು ಸಾಕ್ಷಾತ್, ಮುಚ್ಚಿದ ಕಣ್ಣುರೆಪ್ಪೆಗಳೊಳಗಿಂದಲೇ ಕಂಡಿದ್ದಳು. ಇವನು ಹೋದಕ್ಷಣವೇ ಎದ್ದು ಕಿಟಕಿಯ ಕಂಡಿಯಿಂದ ಇವನು ಹಾದಿ ಸಾಗುವುದನ್ನೇ ನೋಡುತ್ತಿದ್ದಳು—ಒಮ್ಮೆ ಚಪ್ಪರಿಸಿದಳು—

* * *

ಕ್ಲಬ್ಬಿಗೆ ತಂಗಾಳಿಯಲ್ಲಿ ನಡೆದುಹೋಗುತ್ತಿದ್ದಾಗ ಅಂತೋಣಿಯು ತಿಳಿಮನಸಿಗನಾದನು. ಥಂಡಿ, ಜೋರಿನ ನಡಿಗೆ. ಎಲ್ಲವೂ ಅವನ ಮನಸ್ಸನ್ನು ಪರಿಷ್ಕರಿಸಿದ್ದಿತು. "ಇವತ್ತೇ ನಿಮ್ಮ ಹುಟ್ಟಿದ ಹಬ್ಬ" ಎಂದು ಕಿಲಾರಮ್ಮ ಹೇಳಿದ್ದು ಅವನ ಕಿವಿಯಲ್ಲಿ ಗುಂಗುಟ್ಟುತ್ತಿತ್ತು.

ಕ್ಲಬ್ಬಿಗೆ ಬಂದ. ನೋಡಿದ. ಸುಸ್ವಾದು.

ಕ್ಲಬ್ಬೆಲ್ಲಾ ಶೃಂಗಾರ ಮಾಡಲ್ಪಟ್ಟಿದೆ! ಈ ಕ್ಲಬ್ಬಿನ ಸದಸ್ಯರು, ಕಾರ್ಯವಾಹಕರು, ಎಂತಹ ಒಳ್ಳೆಯವರು! ನನ್ನ ಹುಟ್ಟುಹಬ್ಬದ ನಿಮಿತ್ತ ಕ್ಲಬ್ಬನ್ನೇ

ಈ ರೀತಿ ಶೃಂಗಾರ ಮಾಡಿದ್ದಾರೆ! ಇವರ ಸೇವೆಯನ್ನು ನಾನು ಆಜನ್ಮಮಾಡಿದರೂ ಇವರ ಈ ಪ್ರೇಮ ಋಣವನ್ನು ತೀರಿಸಲಾರೆ ಎಂದು ಅಂದುಕೊಂಡ.

ಹೊಸ ಹುರುಪಿನಿಂದ ಕೆಲಸಮಾಡಿದ. ಆ ಬೆಳಿಗ್ಗೆ ಸ್ಟೂಯರ್ಡ್ ಕೂಗಿದಾಗ ಲೆಲ್ಲಾ ಆಂತೋಣಿ ತಕ್ಷಣ ಪ್ರತ್ಯಕ್ಷ. ನೌಕರ ಕೂಗಿದಾಗಲೂ ಅದೇ ರೀತಿ. ಬೆಳಿಗ್ಗೆ ಕ್ಲಬ್ಬಿಗೆ ಮಾಮೂಲಾಗಿ ಬರುವ ನಿವೃತ್ತ ಅಧಿಕಾರಿಗಳ ಕರೆಗೂ ಆಂತೋಣಿ ಸಿದ್ಧ! ಆ ಬೆಳಿಗ್ಗೆ ಕ್ಲಬ್ಬು ಅಂತೋಣಿ ಮಯ!!

*   *   *

೧೧ ಗಂಟೆಗೆ ಆಂತೋಣಿ ಮನೆಗೆ ಬಂದ. ೧೨ಕ್ಕೆ ಊಟಕ್ಕೆ ದಂಪತಿಗಳು ಕುಳಿತರು, ಒಂದೇ ತಟ್ಟೆಯಲ್ಲಿ. ಕ್ಲಬ್ಬಿನಲ್ಲಿ ತನ್ನ ಹುಟ್ಟುಹಬ್ಬದ ಸಲುವಾದ ಸಂಭ್ರಮದ ಏರ್ಪಾಡುಗಳನ್ನೆಲ್ಲಾ ಕಿಲಾರಮ್ಮನಿಗೆ, ತುಣುಕು ಮುದ್ದೆಯೊಂದಿಗೆ ತುತ್ತು ಮುತ್ತಾಗಿ ನುಂಗಿಸಿದ. ಅಪರಾಹ್ನ ೧ಕ್ಕೆ ಒಂದು ಮುದ್ದೆ ರಾಗಿ ಒಂದು ಒಂದು ಸೌಟು ಸಾಂಬಾರಿನ ಊಟ ಮುಗಿಯಿತು.

ಮೂರುಗಂಟೆಗೆ ಎದ್ದ ಆಂತೋಣಿ, ಬೇಗ ಬೇಗ ಕ್ಷೌರಮಾಡಿಕೊಂಡು, ಸಂಜೆಯ ಡ್ಯೂಟಿಗೆ ಹೊರಟೇಬಿಟ್ಟ.

ಕಿಲಾರಮ್ಮನಿಗೆ ಈಗ ಏನು ಮಾಡಲೂ ತೋಚದು! ಮಧ್ಯಾಹ್ನ ಮಾಡಿದ ಮುದ್ದೆಯೇ ಸಂಜೆಗೂ ಸಾಕಾಗಿತ್ತು. ಇತ್ತ ಗಂಡ ಊಟಮಾಡಿ ವೇಳೆಯಾಗಿ ಮನೆಗೆ ಬರುತ್ತೇನೆಂದು ಹೇಳಿಹೋಗಿದ್ದ. ಅವನ ಹುಟ್ಟಿದ ಹಬ್ಬ ಅಂದು! ತಂದೆ ತಾಯಿಯರನ್ನು ಕಾಣದೆ ಅನಾಥಾಲಯದಲ್ಲಿ ಬೆಳೆದು ನೆರೆದಿದ್ದ ಆಕೆಗೆ "ಆಗಾದ ಕಾಲಕ್ಕೆ ಆಗಿಬಂದವನು" ಆಂತೋಣಿಯಾಗಿದ್ದ. ಅವನು ರಾತ್ರಿ ಬರುವತನಕ ಏನು ಕೆಲಸ?

ತನ್ನ ಆಂತೋನೀಗೆ ಅವನ ಹುಟ್ಟುಹಬ್ಬವನ್ನು ತಾನು ಎಷ್ಟು ಖುಷಿಯಿಂದ ಆಚರಿಸುತ್ತಿದ್ದಳೋ ಅದೇ ರೀತಿ ಅವನು ಕೆಲಸಮಾಡುತ್ತಿದ್ದ ಕ್ಲಬ್ಬಿನವರೂ ಅದೇ ಹುಮ್ಮಸ್ಸಿನಿಂದ ಆಚರಿಸುತ್ತಾರೆ, ಅವನನ್ನು ಸುಖಪಡಿಸಲೋಸುಗ ಎಂಬ ಆಲೋಚನೆ ಅವಳನ್ನು ಬಲು ಹಿಗ್ಗಿಸಿತು. "ಯೇಸು ಇದ್ದಾನೆ! ಲೋಕಕ್ಕೆಲ್ಲಾ ಹೊನ್ತೋರಣ ಕಟ್ಟಿದೆ" ಎಂದೇ ಆಕೆಗೆ ಅನ್ನಿಸಿತು. ಆ ಹೊಂಗನಸಿನಲ್ಲೇ ಆಕೆ ತಿರುಗಿ ಮಲಗಿ ನಿದ್ರಿಸಿದಳು.

*   *   *

ಆಂತೋಣಿ ಕ್ಲಬ್ಬಿಗೆ ಬರುವಾಗ ಹಾದಿ ಹಾದಿಯಲ್ಲೂ, ದಾರಿ ದಾರಿಯಲ್ಲೂ, ಮನೆ ಮಠಗಳಲ್ಲೂ ಸಂಭ್ರಮದ ಏರ್ಪಾಡುಗಳಿರುವುದನ್ನು ನೋಡಿದ. ನನ್ನ

ಹುಟ್ಟುಹಬ್ಬಕ್ಕೆ ನಮ್ಮ ಮನೆಯಲ್ಲಿ ಸಂಭ್ರಮ ನ್ಯಾಯ! ನಾನು ಕೆಲಸ ಮಾಡುವ ಕ್ಲಬ್ಬಿನಲ್ಲೂ ಆದರೂ ಆಗಬಹುದು! ಆದರೆ ಊರಿಗೆ ಊರೇ? ಎಂದು ಅನ್ನಿಸದೆ ಇರಲಿಲ್ಲ.

ಕ್ಲಬ್ಬಿಗೆ ೪ ಗಂಟೆಗೆ ಹಾಜರಾದ. ೫ ಗಂಟೆ ಹೊತ್ತಿಗೆ ಕ್ಲಬ್ಬು ಬಿಸಿಯಾಗ ಹತ್ತಿತು. ೬ಕ್ಕೆ ಕಾವೇರಿತು. ೭ಕ್ಕೆ ಕೆಂಪೇರಿತು. ೮ಕ್ಕೆ ತೊದಲಿತು. ೯ಕ್ಕೆ ತಿಂದಿತು. ೧೦ಕ್ಕೆ ಬಾಯಾರಿತು. ೧೧ಕ್ಕೆ ತಿರುಗಿ ಬಾಯಾರಿತು. ೧೨ಕ್ಕೆ ಆಂತೋನಿ ಸುಸ್ತಾಗಿ, ಸೊಂಟದಮೇಲೇ ನಡೆಯುತ್ತಿದ್ದೇನೋ ಎಂಬ ಅನುಮಾನದಿಂದಲೇ ಮನೆಗೆ ಬಂದ. ಅಷ್ಟು ನೋವಾಗುತ್ತಿತ್ತು ಸೊಂಟ! ಅಷ್ಟು ಹೊತ್ತೂ ನಡೆದೂ, ಓಡೀ, ಎಡವೀ, ಬಿದ್ದೂ, ಕೆಡವೀ, ಕದ್ದೂ ಕೆಲಸ ಮಾಡಿದ್ದರಿಂದ.

ಬಾಗಿಲು ತಟ್ಟಿದ ಶಬ್ದದ ಹೊತ್ತಿಗೆ ಕಿಲಾರಮ್ಮ ಎಚ್ಚರವಾಗಿದ್ದಳು. "ಕ್ಲಬ್ಬಿನಲ್ಲಿ ನಿಮ್ಮ ಹುಟ್ಟಿದ ಹಬ್ಬ ಹೇಗೆ ಆಚರಿಸಿದರೂ ಅಂದ್ರೇ!" ಎಂದು ಕೋಕಿಲ ವಾಣಿಯಲ್ಲಿ ಕೇಳಿದಳು. ಅಂತೋನಿಯ ಆಯಾಸ ಪರಿಹಾರವಾಯ್ತು. ಆ ಧ್ವನಿಯಿಂದಲೇ ಕಾಯಕಲ್ಪಗೊಂಡವನಂತೆ ಅವ ಎಲ್ಲವನ್ನೂ ವಿವರಿಸಿದ. ಹೇಗೆ ದಾರಿಗೆ ದಾರಿಯೇ, ಕೇರಿಗೆ ಕೇರಿಯೇ, ಊರಿಗೆ ಊರೇ ತನ್ನ ಹುಟ್ಟುಹಬ್ಬದ ನಿಮಿತ್ತ ಹಬ್ಬವಾಚರಿಸುತ್ತಿತ್ತೋ ಅವೆಲ್ಲವನ್ನೂ ಹೇಳಿದ, ಲೊಚಗುಟ್ಟುತ್ತಾ. ಕ್ಲಬ್ಬಿನಲ್ಲಿ ಎಂದೂ ಸೇರದಿದ್ದ ಜನಸಂದಣಿ ತನ್ನ ಹುಟ್ಟುಹಬ್ಬದ ನಿಮಿತ್ತ ಸೇರಿತ್ತೆಂದೂ, ಅದಕ್ಕಾಗಿಯೇ ನಮ್ಮ ಸರ್ಕಾರವೂ ಕೂಡ ಆ ದಿನವನ್ನು ಸಾರ್ವಜನಿಕ ರಜೆಯನ್ನಾಗಿ ಘೋಷಿಸುತ್ತೆಂದೂ ವಿವರಿಸಿದ.

* * *

ಅಕ್ಟೋಬರ ಎರಡರಂದು ಪೂಜ್ಯ ರಾಷ್ಟ್ರಪಿತನ ತೀವ್ರ ಹಂಬಲವಾದ "ಭಾರತೀಯರ ಮನೆಗಳಲ್ಲೆಲ್ಲಾ ಸುಖ ಸಂತೋಷ ನಲಿದಾಡಲಿ" ಎಂಬ ಹೊಂಗನಸು ಅಂತೋನಿಯ ಮನೆಯಲ್ಲಿ ನನಸಾಯ್ತು! ಕಿಲಾರಮ್ಮನ ಪುಣ್ಯವಂತಿಯಿಂದ.

ಸಾರ್ವಜನಿಕ ಸದಸ್ಯರ ಸಮ್ಮೇಳನದ ಕುರುಹಾದ ಕ್ಲಬ್ಬಿನಲ್ಲಿ ಆತನ ಹಂಬಲ ಕನಸಾಗಿಯೇ ಉಳಿಯಿತು, ಕಿಲಾಡಿಗಳ ಸ್ವಾರ್ಥ ಹಸಿವಿಂದ.

* * *

ಅಕ್ಟೋಬರ ಎರಡು!!

ಮರೆಯಲಾಗದ ಮಹಾತ್ಮನ ಜನ್ಮದಿನ!!

— ಪ್ರಕಾಶ್.

---

# ★ ಅನಾಥಾಲಯಕ್ಕೆ ಹಣ ★

ವಿಪರೀತ ಮಳೆ....ಮುಂಗಾರು ಗಾಳಿಯ ಗುಟುರು....ಆಗಾಗ ಮಿಂಚು ಸಿಡಿಲು ಮೂಡಗೆರೆಯಿಂದ ಚಿಕ್ಕಮಗಳೂರಿಗೆ ನನ್ನ ಕಾರಲ್ಲಿ ಒಬ್ಬನೇ ಬರುತ್ತಿದ್ದೆ.... ಸಂಜೆ ೫, ೫-೧೫ ಇರಬಹುದು... ....ರಸ್ತೆಯ ಪಕ್ಕದಲ್ಲಿ ಮಳೆಯಲ್ಲಿ ತೊಯ್ದ ವ್ಯಕ್ತಿಯೊಬ್ಬ, .. ....... ವಿದ್ಯಾವಂತ, ಶ್ರೀಮಂತ, ವ್ಯಾಪಾರಿ, ಚಿಕ್ಕಮಗಳೂರಿನವ ಇರಬಹುದು,....ಕೈ ಆಡಿಸಿದ....ಪಾಪ !....ಕಾರು ನಿಲ್ಲಿಸಿ ಬಾಗಿಲು ತೆಗೆದೆ....ನನ್ನ ಎಡ ಮಗ್ಗುಲಲ್ಲೇ ಕೂತ....ಚಳಿಗೆ ನಡುಗುತ್ತ........

" ಇಲ್ಲೊಂದು ಎಸ್ಟೇಟಿಗೆ ಬಂದಿದ್ದೆ... ಸ್ನೇಹಿತ ಇದಾನೆ ಅಲ್ಲಿ....ಬಸ್ ತಪ್ಪಿ ಹೋಯಿತು....... ತುಂಬಾ ಥ್ಯಾಂಕ್ಸ್ " ಎಂದೆಲ್ಲ ಹೇಳಿದ........ಪೂರ್ತಿ ನಂಬಲಿಲ್ಲ ನಾನು........ಎಂಥೆಂಥ ಜನರಿರುತ್ತಾರೊ ಜಗತ್ತಿನಲ್ಲಿ ? ನಮ್ಮ ಹುಷಾರಿಯಲ್ಲಿ ನಾವು ಇರಬೇಕು ...ಈತ ವಿಮಾ ಏಜಂಟಾದರೆ ಗತಿ ಏನು ?, ಎಂದು ಸುಮ್ಮನೆ ಅವನ ಮಾತಿಗೆ ಹೂಂಗುಟ್ಟಿದೆ, ಅಷ್ಟೆ.

ಹತ್ತು ಮೈಲಿ ಕಳೆದಿರಬಹುದು....ಸಿಗರೇಟ್ ಹಚ್ಚೋಣ ಅಂತ, ಕಿಸೆಗೆ ಕೈ ಹಾಕಿದೆ, ಎಡ ಕಿಸೆಗೆ ! ಪರ್ಸಿಲ್ಲ........ಮೂಡಗೆರೆಯಲ್ಲಿತ್ತು....ಆಗ ಇಲ್ಲ ! ಯಾವ ಕಿಸೆಯಲ್ಲೂ ಇಲ್ಲ........

ಏಲಾ ಇವನೆ ? ವಿಶ್ವಾಸ ಘಾತುಕ ?........

ಕಾರು ನಿಲ್ಲಿಸಿದೆ....ಇಳಿಯೋ, ಅಂದೆ........ಕೆನ್ನೆಗೊಂದು ಬಿಟ್ಟೆ. ಕೊಡೋ ಪರ್ಸ್‌ನ, ಅಂದೆ........

ಕೊಟ್ಟ !

ಬಿಟ್ಟೆ, ಇನ್ನೊಂದೇಟು........ಅವನನ್ನ ರಸ್ತೆಯಲ್ಲೇ ನಿಲ್ಲಿಸಿ, ಕಾರು ಹತ್ತಿ, ಮನೆಗೆ ಬಂದೆ............ಯಾರನ್ನೂ ನಂಬಕೂಡದು, ನಾಗರಿಕವೇಷದಲ್ಲೇ ಕಳ್ಳರು ಕಾಯುತ್ತಿರುತ್ತಾರೆ, ಅಂತ, ಅವಳಿಗೆ ಹೇಳಿದೆ........ನನ್ನ ಸಮಯ ಸ್ಫೂರ್ತಿಯನ್ನು ಆಕೆ ಮೆಚ್ಚಿದಳು........

ಆಗ, ನನ್ನ ಹಿರಿಯಮಗ, ಕಾರೊಳಗಿಂದ ನನ್ನ ಪರ್ಸನ್ನ ಎತ್ತಿ ತಂದ........ ಹಿಂದಿನ ಸೀಟ್‌ನಲ್ಲಿ ಪೇಪರ್ ಕೆಳಗೆ ಇತ್ತಂತೆ....ನನ್ನನ್ನೇ ಭಾರಿ ದರೋಡೆ ಕೋರ ಅಂತ ಆ ಬಡಪಾಯಿ ತಿಳಿದಿರಬೇಕು.................ಯಾರನ್ನೂ ನಂಬಬಾರದು, ಕಾರೊಡೆಯರಲ್ಲೂ ಕಳ್ಳರುಂಟು, ಅಂತ, ಆತನ ಹೆಂಡತಿಗೆ ಆತ ಹೇಳುತ್ತಿರ ಬಹುದಲ್ಲವೆ ?

ಆತನ ಪರ್ಸಲ್ಲಿದ್ದ ಅರವತ್ತು ಮೂರು ರೂಪಾಯನ್ನು ಅನಾಥಾಲಯಕ್ಕೆ ಕಳುಹಿಸಿದೆ. ಅವರೇ ಅರಗಿಸಲಿ ಆ ಪಾಪವನ್ನ !

—ರೇವಣ್ಣ

# ಮೀಸೆಗೆ ಮಣ್ಣು

---

ಅದ ಕೇಳಿ ಇದ ಹೇಳಿ ಇದ ಕೇಳಿ ಅದ ಹೇಳಿ
....ಕೊನೆಗೆ,...
ಆತನಾ ಹೇಳಿಕೆಯೆ ಸರಿಯೆಂಬ ನಿಜ ನಮಗೆ ಹೊಳೆದಾಗ........
ತಕ್ಷಣವೆ ತಗ್ಗುವುದು, ಜಾಣತನವಲ್ಲ!
ಒಂದೆರಡು ನಿಮಿಷಗಳು ಮತ್ತೆ ವಾದವ ಹೂಡಿ,
"ಪಾಪ! ನೀವೀರೀತಿ ಉಸಿರಾಡಿ ಮಾತಾಡಿ ಕೆಮ್ಮುತ್ತ ಇರುವಾಗ
ನಾನೇಕೆ ಪ್ರತಿಭಟಿಸಿ ಮುಖಭಂಗಗೈಯ್ಯಲಿ?........
ಇರಬಹುದು, ಇದ್ದೀತು, ನಿಜವೆಂದೆ ಒಪ್ಪೋಣ,
ನಿಮ್ಮ ವಾದವ ನೀವು, ನನ್ನ ವಾದವ ನಾನು
ತಿರುತಿರುಗಿ ಒದರುತ್ತ, ಮೈಯ ಬಿಸಿಮಾಡುತ್ತ
....ಜಗಳವೇ ಇದಕೆ ಕೊನೆ!........
ನೀವೊ ನಾನೊ ಈಗ ಸೋಲನೊಪ್ಪಲೆ ಬೇಕು....
ನಾನೆ ಮಾಡುವೆನದನು! ನಿಮಗೇಕೆ ಅಪಮಾನ?"
ಎಂದಾಗ, ಆ ಪ್ರಾಣಿ, ನಿಮ್ಮ ಉಪಕಾರದಿಂ
ಕಿರಿದಾಗಿ, ಬಾಲವನು ಮುದುರಿಕೊಳ್ಳುತ ಎದ್ದು
ಬೆನ್ನ ಬಗ್ಗಿಸಿ ಬೇಗ, ಕದಲುವನು ಅಲ್ಲಿಂದ!
ಬಿದ್ದರೂ ಮೀಸೆಗೆ ಮಣ್ಣು ತಗುಲದಿರಲು
ಇದೆ ತಂತ್ರ........ಮರೆಯದಿರಿ.

— ನಾ. ಕ.

---

# ಸೋಮಾರಿ ಕಲ್ಲು

ನಿಟ್ಟೂರು ಬಿಟ್ಟು ನಾನು ರಾಜ ಚಂದಿ ತಲಕಾಡು ಹಾದಿ ಹಿಡಿದು—ಶಿವಪುರ ಸೇರುವಾಗ್ಯೆ ಸಾಯಂಕಾಲವಾಗಿತ್ತು. ನಾವು ಬಿಟ್ಟ ನಿಟ್ಟೂರು ಹೋಟೆಲಿನಲ್ಲಿ ಸೇರಿದ್ದ ರಾಜಕೀಯ ಸಭೆಯ ಸವಾಲು ಪಾಟೀಸವಾಲುಗಳು ಇನ್ನೂ ನನ್ನ ತಲೆಯನ್ನು ಬಿಟ್ಟಿರಲಿಲ್ಲ ಅವು ನನ್ನ ತಲೆಯನ್ನು ಬಿಡುವವರಿವಿಗೂ ಬೇರೆ ಯಾವ ಸಮಾಚಾರವೂ ನನ್ನ ತಲೆಯನ್ನು ಹೊಕ್ಕುವ ಅವಕಾಶವೂ ಇರಲಿಲ್ಲ. ಹೀಗಾಗಿ ನನ್ನ ಮೆದುಳು ಹಳೆಯ ವಿಷಯಗಳನ್ನು ಹೊರದೂಡುವುದಕ್ಕೂ ಹೊಸ ವಿಷಯ ಗಳನ್ನು ಆರಿಸಿಕೊಳ್ಳುವುದಕ್ಕೂ ಆತುರಪಡುತ್ತ — ಸಧ್ಯದಲ್ಲಿ ಖಾಲಿಯಾಗಿತ್ತು. ಹಾಗಾಗಿ—ನಾವು ಶಿವಪುರ ಸೇರಿದಾಗ ಊರು ಮುಂದೆ ತೋರಣವಿದ್ದದ್ದು ನನಗೆ ಗೋಚರವಾಗಲಿಲ್ಲ ಊರೊಳಗೆ ತುಸ ದೂರ ಹೋದಮೇಲೆ—ಊರಲ್ಲಿ ಏನೋ ಒಂದು ಸಂಭ್ರಮವಿರುವ ಹಾಗೆ ಕಂಡು ಬಂತು.

"ಏನೋ ಹಬ್ಬವಿರಬೇಕು—ಅಥವಾ ಮಂತ್ರಿಯೋ ಕಂತ್ರಿಯೋ-ತಂತ್ರಿಯೋ ಈ ಊರಿಗೆ ವಕ್ರಿಸಬಹುದು" ಅಂದ ಚಂದಿ.

"ಇರಲೇಬೇಕು—ಅದಕ್ಕೇ ಊರ ಮುಂದಿನ ತೋರಣ" ಅಂದ ರಾಜ.

ಬಾಯಿ ಬಿಟ್ಟರೆ ಬಣ್ಣಗೇಡು—ಅಂತ ನಾನು ಸುಮ್ಮನಿದ್ದೆ.

ಅಷ್ಟರಲ್ಲಿ ಊರೊಳಗಿನ ಜನರ ಧಾಂಧಲೆಯೂ ಕಣ್ಣಿಗೆ ಬಿತ್ತು. ನನಗೆ ಆಗಲೇ ಎದೆ "ದಿಫ್" ಎಂದಿತು. ಏಕೆಂದರೆ—ಆ ರಾತ್ರಿ ಶಿವಪುರದಲ್ಲೇ ನಮ್ಮ ಝಾಂಡವೆನ್ನುವ ಸೂಚನೆಗಳೆಲ್ಲವೂ ಇದ್ದವು. ಇದರ ಮೇಲೆ ಊರಲ್ಲಿ ಕೂಗಾಟ ಹೋರಾಟಗಳೂ ಇದ್ದುಬಿಟ್ಟರೆ—ರಾಜ ಚಂದಿ ಇಬ್ಬರಿಗೂ—ಕೊಳ್ಳೀದೆವ್ವಗಳಿಗೆ ದೀಪಾವಳೀ ಹಬ್ಬ ಬಂದ ಹಾಗೆ! ಇದು ನನ್ನ ಯಾವತ್ತಿನ ಸಮಸ್ಯೆ!

ಮಹಾತ್ಮಾ ಗಾಂಧೀಕೀ ಜೈ! ಜವಹರ್‌ಲಾಲ್ ನೆಹರೂಕೀ ಜೈ!!........ ........ಕೀ ಜೈ!!!"

ಈ ಕೂಗಾಟಗಳು ನಾವು-ಮೂವರನ್ನೂ ನಮ್ಮ ವಾಹನಗಳಿಂದ ಇಳಿಸಿದುವು. ಲಾಟಿ ಸಜ್ಜಿತರಾದ ಬಾಲಕ ಬಾಲಕಿಯರ ಗುಂಪೊಂದು ರಸ್ತೆಯಲ್ಲಿ ಧಾವಿಸಿ ಬಂತು.

ಗುಂಪಿನಲ್ಲಿ ಅತೀ ಧಡೂತಿಯಾಗಿದ್ದ ಬಾಲಕನನ್ನು ವಿಚಾರಿಸಲು—ಆಗಲೋ—ಇನ್ನೊಂದು ಘಳಿಗೆಗೋ—ಶಿವಪುರಕ್ಕೆ, ದೇಶದ ನಾಯಕರೊಬ್ಬರು, ಶಿವಪುರದ ಊರಮುಂದಿನ ಮೈದಾನದಲ್ಲಿ, ಶಿವಪುರದ ಸಾಹುಕಾರ ಖಜಾನಪ್ಪನವರು ಶಿವಪುರದ ಪುರಜನರಿಗೆ ದಾನ ಮಾಡಿದ ಒಂದು ಬೆಂಚುಕಲ್ಲನ್ನು—ಸ್ಥಾಪನೆ ಮಾಡುವುದಕ್ಕಾಗಿ ಬರುವವರಿದ್ದಾರೆ—ಅಂತ ತಿಳಿಯಿತು. ನಮಗೆ ಎರಡನೆ ಆಹ್ವಾನ ಬೇಕಾಗಿರಲಿಲ್ಲ. ಶಿವಪುರದ ಊರಮುಂದಕ್ಕೆ ನಾವೂ ಹಿಂತಿರುಗಿದೆವು.

ನಾವೆಲ್ಲ ಅಲ್ಲಿ ಸೇರುವ ಹೊತ್ತಿಗೆ ಊರಿನ ಎಂಟೂ ದಿಕ್ಕುಗಳಿಂದ ಜನರು ಬಂದು ನೆರೆದರು. ಮೂರು ಘಂಟೆಗಳ ಕಾಲ ಕಾದಮೇಲೆ—ಕತ್ತಲೆಯಾಗುವ ಹೊತ್ತಿಗೆ—ಮುಖ್ಯ ಅತಿಥಿಗಳು ಸಿಬ್ಬಂದಿಯೊಡನೆ ಬಂದರು. ಶಿವಪುರದ ಜನರು ಜಯಭೇರಿಯೊಡನೆ ಅತಿಥಿಗಳನ್ನು ಅಂತರಿಕ್ಷಕ್ಕೇರಿಸಿದರು. ಜೊತೆಗೆ ಶಿವಪುರದ ಭೂಮಾತೆಯನ್ನೂ ಅಂತರಿಕ್ಷಕ್ಕೇರಿಸಿದರು.

ಧೂಳೆಲ್ಲ ಇಳಿದಮೇಲೆ—ಮುಖ್ಯ ಅತಿಥಿಗಳು ಎರಡುಬಾರಿ ಕೆಮ್ಮಿ ಗಂಟಲು ಸರಿಪಡಿಸಿಕೊಂಡು ಎದ್ದು ನಿಂತಾಗ–ಶಿವಪುರದ ಜನರ ಸ್ವಾಗತ ಭಾಷಣ, ಶಿವಪುರದ ಪುರಜನರ ಭಾಷಣಗಳು, ಶಿವಪುರದ ಸಾಹುಕಾರ ಖಜಾನಪ್ಪನವರ ಪ್ರಶಂಸೆ, ಮುಖ್ಯ ಅತಿಥಿಗಳ ಅಮೃತಹಸ್ತದಿಂದ ಬೆಂಚುಕಲ್ಲಿನ ಸ್ಥಾಪನಾ ಸಮಾರಂಭ—ಇವೆಲ್ಲವೂ ಮುಗಿದುಹೋಯ್ತೆಂದು ತಿಳಿಯಿತು. ಸಧ್ಯ—ಅಷ್ಟು ಸಂಕಟ ಕಡಿಮೆಯಾಯ್ತೆಂದು ಮನಸ್ಸಿನಲ್ಲಿ ಸಮಾಧಾನ ಪಡುತ್ತ—ಮಾನ್ಯ ಅತಿಥಿಗಳ ಭಾಷಣಕ್ಕೆ ಕಿವಿ ಸರಿಪಡಿಸಿಕೊಂಡೆ. ಕೇಳಿದಮೇಲೆ ಮನಸ್ಸಿಗೆ ಎಷ್ಟೋ ನೆಮ್ಮದಿಯಾಯ್ತು.

ಹೌದು–ನೆಮ್ಮದಿ. ನನಗೆ ಅವತ್ತಿನವರಿವಿಗೆ–ನಮ್ಮ ದೇಶದ ಅಭಿವೃದ್ಧಿಗೆ—ನಮ್ಮ ದೇಶದ ಯಶಸ್ಸಿಗೆ—ಯಾವನೋ ಒಬ್ಬ ಆದರ್ಶ ವ್ಯಕ್ತಿ ಕಾರಣನೆಂದು ಗುಮಾನಿ ಇತ್ತೇ ವಿನಹ—ಆ ವ್ಯಕ್ತಿ ಯಾರೆಂದು ನನಗೆ ತಿಳಿದಿರಲಿಲ್ಲ, ಈಗ ತಿಳೀತು—ಇವರೇ! ಅಯ್ಯೋ! ಈತನಂತಹ ಕೇವಲ ಒಂದು ಡಜನ್–ಅಥವ ಅಷ್ಟದಿಕ್ಕಿಗೂ ಒಬ್ಬೊಬ್ಬನಾದರೂ ವ್ಯಕ್ತಿ ಇರಬಾರದೇ — ನಮ್ಮ ದೇಶದಲ್ಲಿ—ಅನ್ನಿಸಿತು! ಆದರೂ—ಆತನಿಗೆ ಕಿಂಚಿತ್ತಾದರೂ ಜಂಭ ಉಂಟೆ? ಇಲ್ಲ. ಭಾಷಣ ಮಾಡುವಾಗ ಹದಿನಾರು ಬಾರಿ ಮಹಾತ್ಮಾ ಗಾಂಧೀಜಿಯವರಿಗಾಗಿ ಕಣ್ಣೀರು ಸುರಿಸಿದರು. ಅವರು ಗಾಂಧೀಜಿಯವರ ಹೆಸರೆತ್ತಿದಾಗಲೆಲ್ಲಾ ನನಗೂ ಕಣ್ಣೀರು ಬರುತ್ತಿತ್ತು. ಆದರೂ—ಈ ಒಬ್ಬ ವ್ಯಕ್ತಿ ಇಲ್ಲದಿದ್ದರೆ ಗಾಂಧೀಜೀಯವರಂತಹವರ ಕೈಲಿ ಏನೇನೂ ಕಿಸಿಯುತ್ತಿರಲಿಲ್ಲ—ಅನ್ನುವ ಭಾವನೆಯೇ ನನ್ನನ್ನು ರಕ್ಷಿಸಿತು! ಇಲ್ಲದಿದ್ದರೆ — ನನಗೆ ಹುಚ್ಚೇ ಹತ್ತುತ್ತಿತ್ತು! ಮುಖ್ಯ ಅತಿಥಿಗಳು ಭಾಷಣ ಮಾಡುವಾಗ ಗಾಂಧಿಜಿಯವರನ್ನು ಹೊಗಳಿದರು. ಜೊತೆಗೆ ಜವಹರಿಲಾಲ್ ನೆಹರೂರವರನ್ನೂ ಹೊಗಳಿದರು — ಇದು ಅವರ ಮನಸ್ಸಿನ ಉದಾರತೆಯನ್ನು

ತೋರಿಸುತ್ತೆ. ಕಡೆಯಲ್ಲಿ ಸಂಪ್ರದಾಯಕವಾಗಿ ಈಗಿನಕಾಲದ ವಿದ್ಯಾರ್ಥಿಯರನ್ನು ಯತೇಚ್ಚವಾಗಿ ಬೈದರು. ತಾವು ವಿದ್ಯಾರ್ಥಿಯಾಗಿದ್ದಾಗ ಹೇಗೆ ಆದರ್ಶ ವಿದ್ಯಾರ್ಥಿಯಾಗಿದ್ದರು—ಅಂತ ವರ್ಣಿಸಿದರು. ನನಗೆ ನಿಜಕ್ಕೂ ಅವರಲ್ಲಿ ಭಕ್ತಿ ಹೆಚ್ಚಿತು. ನನ್ನ ಮತವನ್ನು ಆ ಕ್ಷಣದಲ್ಲಿಯೇ ಅವರಿಗೆ ದಾನಮಾಡಿಬಿಟ್ಟೆ.

ಭಾಷಣ ಮುಗಿಯುವ ಹೊತ್ತಿಗೆ ವಿದ್ಯಾರ್ಥಿಗಳ್ಯಾರೂ ಸಭೆಯಲ್ಲಿರಲಿಲ್ಲ. ಸಭೆ ಮುಕ್ತಾಯವಾಗುವಾಗ್ಯೆ—ಮುಖ್ಯ ಅತಿಥಿಗಳು, ಅವರ ಸಿಬ್ಬಂದಿ, ಖಜಾನಪ್ಪ –ಖಜಾನಪ್ಪನ ಸಿಬ್ಬಂದಿ, ನಾನು, ರಾಜ, ಚಂದಿ, ಬೆಂಚುಕಲ್ಲು–ಇಷ್ಟೇ ಅಲ್ಲಿದ್ದುದು. ಖಜಾನಪ್ಪನೇ ವಂದನಾರ್ಪಣೆ ಮಾಡಿದ. ನಾವೆಲ್ಲರೂ ಸೇರಿ ಅಪಸ್ವರದಲ್ಲಿ ಒಟ್ಟಿಗೆ ರಾಷ್ಟ್ರಗೀತೆ ಹಾಡಿದಮೇಲೆ ಸಭೆ—ಬೆಂಚುಕಲ್ಲು—ಉಳಿದು ಚೆಲ್ಲಾಪಿಲ್ಲಿಯಾಯ್ತು. ನಾನು, ರಾಜ, ಚಂದಿ, ಮಿಕ್ಕ ಜನರನ್ನೆಲ್ಲಾ ಅವರವರ ಪಾಡಿಗೆ ಬಿಟ್ಟು–ಹಳಸಿದ್ದರೂ ಪರವಾಗಿಲ್ಲ—ಅನ್ನ ಹುಡುಕುತ್ತ ಹೊರಟೆವು.

ಶಿವಪುರದಲ್ಲಿ ಅಂದು ನಾವು ಇಳಿದುಕೊಂಡ ಹೋಟೆಲಿನಲ್ಲಿಯೇ, ಅಂದು, ಸಭೆಗಾಗಿ ಬಂದಿದ್ದ ಕೆಲವರೂ ಸೇರಿದ್ದರು. ಹಾಗಾಗಿ—ಈ ಡಾಕ್ಟರುಗಳು ದಿನ ಬೆಳಗಾದರೆ ಮಾಡ್ತಾರಲ್ಲಾ ಪೋಸ್ಟ್‌ಮಾರ್ಟಂ!—ಅದೇ ತರಹ ಊಟಮಾಡುವಾಗ ಶಿವಪುರದ ಸಮಾರಂಭದ ಪೋಸ್ಟ್‌ಮಾರ್ಟಂ ನಡೆಯಿತು. ಆಗ ಕೇಳಿಬಂದ ಕೆಲವು ಮಾತುಗಳು—

"ಅನ್ಯಾಯ—ಶಿವಪುರದಲ್ಲಿ ಒಂದು ಬೆಂಚುಕಲ್ಲಿಗಾಗಿ ಈ ಸಂಭ್ರಮ ಯಾಕೆ ಬೇಕಿತ್ತು?"

"ಸಿದ್ಧಾಪುರದೋರು ಒಂದು ಭಾವೀಗಾಗಿ ನಮ್ಮ ಮುಂದೆ ಅಷ್ಟು ಸಂಭ್ರಮ ನಡೆಸಿರೋವಾಗ—ನಾವು—ಶಿವಪುರದೋರು ಸುಮ್ನೇ ಇರೋಕಾಗುತ್ಯೇ?"

"ಕಲ್ಲು--ಈ ಊರು ಬಂಡೇದೋ—ಅಥವಾ........"

"ಈ ಊರು ಮುಂದೆ ಹಾಳು ಬಿದ್ದಿರೋ ಪಟಾಲಮ್ಮನ ಗುಡೀ ಮೆಟ್ಟಿಂದು ಖಜಾನಪ್ಪನೋರು ಕಷ್ಟಪಟ್ಟು ತಮ್ಮ ಆಳುಗಳಿಂದ ಅದನ್ನು ಕೀಳಿಸಿ — ಇಲ್ಲಿ ನೆಟ್ಟಿಸಿದರು"

"ಸಮಾರಂಭಕ್ಕೆ ಅವರೆಷ್ಟು ಖರ್ಚು ಮಾಡಿದರು—"

"ಪಾಪ–ಎಲ್ಲಾ ಅವರೇ ಮಾಡೋಕಾಗುತ್ಯೆ–ಊರಿನಲ್ಲಿ ಚಂದಾ ಎತ್ತಿದರು"

"ಆದರೂ–ಭಾಷಣಕಾರರು–ನಮ್ಮ ಹುಡುಗರನ್ನ—ಹಾಗೆ ಬಯ್ಯಬಾರದಿತ್ತು"

"ಥತ್! ಅವನೊಬ್ಬ! ಅವನ ಮನೆ ಹಾಳಾಯ್ತು! ಹೆಬ್ಬೆಟ್ಟು ಗುರುತಿನಲ್ಲೇ ಈಗಲೂ ತನ್ನ ಸೈನು ಮಾಡ್ತಾನೆ! ಯಾವುದೋ ಕಾರಣಕ್ಕೆ ಜೈಲಿಗೆ ಹೋಗಿದ್ದ. ಕಾಕತಾಳ ನ್ಯಾಯ—ಕೆಲವು ನಾಯಕರ ಜೊತೇಲಿ ಜೈಲಿನಲ್ಲಿ ಅಲೆದಾಡಿ—ಅವರ ಜೊತೇಲಿ ಖುಲಾಸೆಯಾಗಿ ಬಂದ—ಅವನೂ ನಾಯಕನಾದ"

"ಹಾಗಿದ್ದಮೇಲೆ—ಇವನ್ನ ಯಾಕ್ರೀ ಕರೆಸಬೇಕಾಗಿತ್ತು?"

"ಇನ್ನು ಯಾರಯ್ಯಾ—ತಮ್ಮ ಖರ್ಚಿನಲ್ಲೇ ಶಿವಪುರಕ್ಕೆ ಬರೋರು?"

ಮಿಕ್ಕ ವಿಷಯ ಅಷ್ಟು ನನಗೆ ಜ್ಞಾಪಕವಿಲ್ಲ.

ಊಟವಾದಮೇಲೆ ನಾನು ರಾಜ ಚಂದಿ ಒಂದು ಕೋಣೆ ಬಿಡಿಸಿಕೊಂಡು—ಸೇರಿಕೊಂಡೆವು.

"ಸಾರ್ಥಕವಾಯ್ತಯ್ಯ-ನಮ್ಮ ಪ್ರಜಾಪ್ರಭುತ್ವ!" ಅಂತ ಶುರುಹಚ್ಚಿದ ರಾಜ.

"ಅಲ್ರಯ್ಯಾ-if voters-I mean-ಈಗಿರೋ ವಯಸ್ಕರ ಮತದಾನ—ಮತದಾನ ಮಾಡುವವರು-ಶೇಕಡಾ 60-70—ಜನ—ಈ ತರಹ ಜನ ಮರುಳೋ ಜಾತ್ರೆ ಮರುಳೋ-ಅನ್ನೋಹಾಗೆ ಆದರೆ-ದೇವರೇ ಗತಿ!" ಅಂದ ಚಂದಿ.

ಅದಕ್ಕೆ ರಾಜ ಅಂದ—

"ಏನು ಮಾಡೋದು. ಇವೆಲ್ಲಾ unavoidable Sins! Mistakes!! ನನ್ನನ್ನ ಕೇಳಿದರೆ-ಈ ವಯಸ್ಕರ ಮತದಾನ—adult franchise—ನ ಇನ್ನೂ ಹತ್ತುವರ್ಷ ಕಾಲ ತಳ್ಳಿಹಾಕಬಹುದಿತ್ತು. ಪ್ರತಿಯೊಬ್ಬನಿಗೂ—ಈತ Saintಉ ಈತ Sinnerಉ — ಈ ವ್ಯತ್ಯಾಸ ತಿಳಿಯೋತನಕ—Adult franchise—ಅಪಾಯ! ಆದರೆ—ನಮ್ಮ ದೇಶ ಇಂಗ್ಲೆಂಡಲ್ಲ! ಯುದ್ಧ ಮುಗಿದ ತಕ್ಷಣ ಯುದ್ಧವನ್ನೇ ಗೆದ್ದುಕೊಟ್ಟ ಚರ್ಚಿಲ್ಲನ್ನು ಮನೆಗೆ ಕಳುಹಿಸುವ ಮತದಾರರು ಇಲ್ಲಿಲ್ಲ! ಹಾಗೂ ತಮ್ಮ ಕೆಲಸ ಮುಗಿದಮೇಲೆ—ತಮ್ಮನ್ನು ಬಿಟ್ಟು ಬೇರೆ ಬುದ್ಧಿವಂತರೂ ದೇಶದಲ್ಲಿದ್ದಾರೆ—ಅನ್ನುವ ಚರ್ಚಿಲ್ಲರೂ ನಮ್ಮ ದೇಶದಲ್ಲಿಲ್ಲ"

—ಅಂತ!

ರಾಜ ಕೆಲವು ವೇಳೆ ಚೆನ್ನಾಗಿ ಮಾತನಾಡುತ್ತಾನೆ — ಆಗ ನಾನೇನೂ ಪ್ರತ್ಯುತ್ತರ ಕೊಡೋಕೆ ಹೋಗೊಲ್ಲ. ಈಗಲೂ ಹೋಗಲಿಲ್ಲ.

— "ಕೇಫ".

---

# ಅಯ್ಯೋ! ಪಾಪ!!

---

ನಾಲ್ಕೈದು ದಿನದಿಂದಲೂ ಕೊರಮ ಆಫೀಸಿಗೆ ಬಂದೇ ಇರಲಿಲ್ಲ. ಕಾರಣ ತಿಳಿದು ಕಾಫಿ ಗಿಟ್ಟಿಸಿ ಬರೋಣವೆಂದು ಕೊರಮನ ಮನೆಯ ಕಡೆಗೆ ಹೊರಟೆ

* * *

ಕೊರಮ ವರ್ಾಂಡದಲ್ಲಿ ಬೆತ್ತದ ಕುರ್ಚಿಯ ಮೇಲೆ ಎರಡೂ ಕೈಗಳಿಂದ ಮುಖ ಮುಚ್ಚಿಕೊಂಡು ಕುಳಿತಿದ್ದ. ನನ್ನನ್ನು ಕಂಡಕ್ಷಣವೇ ಅವನು ಅಳತೊಡಗಿದ. ಎಲಾ ಕೊರಮ! ಹೊಸರಾಜ್ಯಕ್ಕೆ ಹೆಸರಿಡುವ ಪ್ರಶ್ನೆ ಬಂದಾಗ ಮೈಮೇಲಿನ ನುಶಿ ಹೊಡೆದಂತೆ ಪರಿಹಾರ ಸೂಚಿಸಿದ ಕೊರಮ ಇಂದೇಕೆ ಹೀಗಿದ್ದಾನೆ? "ಯಾಕೋ ಕೊರಮ!" ಎಂದೆ ನಾನು.

"ಏನು ಹೇಳಲಿ ಸದಾನಂದ! ನಾಲ್ಕೈದು ದಿನದ ಕೆಳಗೆ ಇದ್ದಕ್ಕಿದ್ದಂತೆ ನನ್ನ ಗೃಹಲಕ್ಷ್ಮಿಗೆ ಚಳಿಜ್ವರ ಸುರುವಾಯಿತು. ನಿನ್ನೆಯಂತೂ ಕೈಕಾಲು ಸಹ ಆಡಿಸಲು ಬರಲಿಲ್ಲ. ಕಡೆಗೆ ರಾತ್ರಿ—ನನ್ನನ್ನು ಬಿಟ್ಟು ಸ್ವರ್ಗಕ್ಕೆ ಹೊರಟುಹೋದಳು" ಎಂದು ಹೇಳಿ ಮತ್ತೆ ಅಳಲು ಸುರುಮಾಡಿದ ಕೊರಮ.

* * *

"ಹೋಗಲಿಬಿಡು ಕೊರಮ. ಹುಟ್ಟಿದ ಪ್ರತಿ ಒಬ್ಬನೂ ಸಾಯಲೇಬೇಕಲ್ಲವೆ? ತಾಯಿ ತಂದೆ ತಂಗಿ ಸತ್ತಾಗ ಇಷ್ಟು ದುಃಖಿಸದೇ ಧೈರ್ಯದಿಂದ ಇದ್ದವನು ಈಗ ಏಕೆ ಹೀಗೆ ಅಳುತ್ತಿರುವಿ. ಸಮಾಧಾನ ತಂದುಕೋ" ಎಂದೆ.

ಆಗ ಕೊರಮ ಬಿಕ್ಕುತ್ತಾ ಹೇಳತೊಡಗಿದ. "ತಂದೆ ಸತ್ತಾಗ ಆಚೆಮನೆಯ ಮುಕುಂದಪ್ಪನು ಬಂದು ಕೊರಮಾ ಚಿಂತೆಮಾಡಬೇಡ. ನಮ್ಮನ್ನೆಲ್ಲ ನಿನ್ನ ತಂದೆ ಎಂದೇ ತಿಳಿದುಕೊ ಎಂದಿದ್ದರು. ತಾಯಿ ಸತ್ತಾಗ ಈಚೆಮನೆ ಕಮಲಮ್ಮ ಬಂದು ಅಳಬೇಡ ಕೊರಮ. ಹೆತ್ತತಾಯಿ ಸತ್ತರೇನಾಯಿತು? ನಾವಿಲ್ಲವೆ? ನಿನ್ನನ್ನು ಅವಳಿಗಿಂತಲೂ ಹೆಚ್ಚಾಗಿ ನೋಡುತ್ತೇವೆ ಎಂದು ಹೇಳಿ ಸಮಾಧಾನಪಡಿಸಿದ್ದರು. ತಂಗಿ ಸತ್ತಾಗ ನೆರೆಮನೆಯ ಸುಲೋಚನಾ ಬಂದು ಅಳಬೇಡ ಕೊರಮಣ್ಣ. ನಮ್ಮನ್ನೆಲ್ಲ ತಂಗೀ ಎಂದೇ ತಿಳಿದುಕೊಂಡು ನಿನ್ನ ದುಃಖ ಮರೆ ಅಣ್ಣಾ ಎಂದು ಹೇಳಿ ನನ್ನನ್ನು ಸಮಾಧಾನಪಡಿಸಿದ್ದರು—ಆದರೆ....ಆದರೆ....ಈಗ........"

"ಈಗ ಏನಾಯಿತೋ? ಎಂದೆ ನಾನು.

“ಏನು ಹೇಳಲಿ ಸದಾನಂದ—ನನ್ನ ಹೆಂಡತಿ ಸತ್ತಾಗಿನಿಂದ ಒಬ್ಬರಾದರೂ ಬಂದು ಅಳಬೇಡ ಕೊರವ ನನ್ನನ್ನು ನಿನ್ನ ಹೆಂಡತಿ ಎಂದು ತಿಳಿ ಎಂದು ಹೇಳುವವರಿಲ್ಲವಲ್ಲಾ ಎಂದು ನನಗೆ ದುಃಖವಾಗುತ್ತಿದೆ”—ಎಂದು ಮತ್ತಷ್ಟು ಅಳತೊಡಗಿದ—

ಎಲಾ ಕಳ್ಳಕೊರವಾ!! ಎಂದೆ ನಾನು.

— ಉಡಪೀ.

---



“ಅಯ್ಯೊ ಬೆಪ್ಪೆ ಯಾಕೆ ಹಾಗೆ ನೋಡ್ತಿಯ ಆ ಕಾಲ ಹೋಯ್ತು
ಟಿಪ್ ಕೊಡೋದು ಫರಂಗಿಯವರ ಜೊತೆಗೇ ಹೋಯ್ತು”

# ನಂಬಿ ಕೆಡಬಾರದು

ಒಂದೊಮ್ಮೆಗೆ ಶತ್ರುಗಳು ಹಠಾತ್ತಾಗಿ ಅಮೇರಿಕದ ಮೇಲೆ ಧಾಳಿ ಮಾಡಿದರೆ ಅಲ್ಲಿನ ನಗರಗಳವರು ಯಾವರೀತಿ ವರ್ತಿಸಬೇಕೆಂಬುದರ ಕುರಿತು ಅವರಿಗಾಗಲೇ ತರಬೇತಿಕೊಡಲು ತೊಡಗಿದ್ದಾರಂತೆ. ಹೈಡ್ರೋಜಿನ್ ಬಾಂಬುಗಳು ಬಿದ್ದೇ ಬಿದ್ದವು ಎಂಬಂತೆ ಸೈರನ್ ಮೊದಲಾದುವುಗಳಿಂದ ಗುಲ್ಲೆಬ್ಬಿಸಿ ಜನರು ಪರದಾಡುತ್ತ ಸಂದುಗೊಂದುಗಳನ್ನು ಸೇರಿಕೊಂಡು ಜೀವರಕ್ಷಣೆ ಮಾಡಿಕೊಳ್ಳುವ ಬಗೆಯನ್ನು ಮೊನ್ನೆ ಮೊನ್ನೆ ನ್ಯೂಯಾರ್ಕ್ ನಗರದಲ್ಲಿ ಪ್ರದರ್ಶಿಸಿದರಂತೆ. ಇದರಿಂದ ಅಲ್ಲಿನ ಜನರಲ್ಲಿ ಸಮರ ನಿರೀಕ್ಷಣಾ ಬುದ್ಧಿ ಬೆಳೆಯುವುದಿಲ್ಲವೆ ಎಂದು ಬುದ್ಧಿಯಿಲ್ಲದವರು ಶಂಕಿಸಿಯಾರು ಆದರೆ ಅಂಥವರಿಗೆಲ್ಲ ಐಕ್, ನಿಕ್ಸನ್, ಡಲ್ಲೇಶರು ಒಂದೊಂದು ಬಗೆಯ ಉತ್ತರವನ್ನು ಕೊಟ್ಟೇ ಕೊಡಬಲ್ಲರು. ಮುಖ್ಯವಾಗಿ ಡಲ್ಲೇಶರಂತೂ ಭೀತಿ ಬಿಟ್ಟು ಬದುಕುವುದು ತಪ್ಪು ಎನ್ನುತ್ತಾರೆ. ಯಾವ ಘಳಿಗೆಯಲ್ಲಿ ಯಾರು ಬಂದು ಕತ್ತು ಹಿಚುಕುತ್ತಾರೋ ಎಂದು ಎಚ್ಚರದಿಂದಲೇ ಇರಬೇಕು ನಮ್ಮ ಕತ್ತಿ ಮಸೆಯುತ್ತಲೇ ಇರಬೇಕು. ನಾವು ಮಸೆಯುವುದನ್ನು ಕಂಡು ನಮ್ಮ ವೈರಿಗಳೂ ಮಸೆಯಲು ತೊಡಗುತ್ತಾರೆಯೆ? ಮಸೆದುಕೊಳ್ಳಲಿ! ನಾವಂತೂ ಸಿದ್ಧರಾಗಿರೋಣ, ಎಂದಾರು ಡಲ್ಲೇಶ್!

ಭೀತಿ ಮಾನವ ಜನಾಂಗದ ಜನ್ಮಸಿದ್ಧ ಹಕ್ಕು. ಅನಾದಿ ಮಾನವ ಶಸ್ತ್ರಾಸ್ತ್ರಗಳನ್ನು ಮಾಡತೊಡಗಿದ್ದೂ ಭೀತಿಯಿಂದಲೇ ಅದನ್ನು ಈಗ ಬಿಟ್ಟು ಬಿಡುವುದಕ್ಕಾಗುತ್ತದೆಯೆ? ಭೀತಿಯಿಲ್ಲದಿದ್ದರೆ ನಮ್ಮನ್ನು ನಾವು ರಕ್ಷಿಸಿಕೊಳ್ಳುವ ಬುದ್ಧಿ ಹುಟ್ಟುತ್ತದೆಯೆ? ನೆಹರು ಹೇಳುತ್ತಾರೆ ಭೀತಿ ಬಿಟ್ಟು; ಶಂಕೆ ತೊರೆದು ಬಾಳಿ ಅಂತ. ದೊಡ್ಡ ಮಾತು ನಿಜ. 'ನೆಹರೂ ಕಿ ಜೈ'! ಆದರೆ ಭೀತಿ ಬಿಟ್ಟು ಬದುಕುವುದು ಸಾಧ್ಯವೇ ಇಲ್ಲ, ನಮಗೆ. ರಾಜ್ಯಗಳ ಪುನಾರಚನೆಯಾಗುತ್ತಿರುವ ಈ ಕಾಲದಲ್ಲಂತೂ ಸಾಧ್ಯವೇ ಇಲ್ಲ- ನಮ್ಮ ದೇಶದಲ್ಲಿ.

ಒಂದು ಭಾಷೆಯವರು ಇನ್ನೊಂದು ಭಾಷೆಯವರನ್ನು ನಂಬಿದರೆ ಕೆಟ್ಟರು. ಒಬ್ಬರು ಇನ್ನೊಬ್ಬರನ್ನು ಸಂಶಯದಿಂದಲೇ ಕಾಣಬೇಕು. ಇದರಿಂದ ಸೌಹಾರ್ದ ಬೆಳೆಯುವುದು ಹೇಗೆ ಎಂದು ಯಾರೂ ಗೋಳಾಡಬೇಕಾಗಿಲ್ಲ. ಎಲ್ಲಕ್ಕಿಂತಲೂ ಮೊದಲು ಬೇಕಾದದ್ದು ಸಂರಕ್ಷಣೆ. ಡಲ್ಲೇಶರನ್ನು ಕೇಳಿ-ಹೇಳುತ್ತಾರೆ! ನಂಬಿ ನಾಮ ಹಾಕಿಸಿಕೊಳ್ಳುವುದು ಬುದ್ಧಿವಂತರ ಲಕ್ಷಣವಲ್ಲ. ಪ್ರತಿಯೊಂದು ಭಾಷಾ ರಾಜ್ಯ

ದಲ್ಲಿಯೂ ಹಲವಾರು ವಿಭಾಗಗಳು ಇದ್ದಾವೆ. ಆಯಾ ಪ್ರಾದೇಶಿಕ ವಿಭಾಗಗಳವರು ಬಲು ಎಚ್ಚರದಿಂದಿರಬೇಕಾದ್ದು ಅಗತ್ಯ. ಉದಾ:-ದಕ್ಷಿಣ ಕನ್ನಡದವರು ಮೈಸೂರಿನವರು, ಉತ್ತರ ಕರ್ಣಾಟಕದವರು, ಹೈದರಾಬಾದಿನವರು, ಬಳ್ಳಾರಿಯವರು, ಕೊಡಗಿನವರು-ಎಲ್ಲರೂ ಒಬ್ಬರನ್ನೊಬ್ಬರು ಪೂರ್ತಿ ನಂಬಿದರೆ ಕೆಟ್ಟರು. ಪ್ರತಿಯೊಬ್ಬರೂ ಉಳಿದವರು ನಮ್ಮನ್ನು ಒಂದಲ್ಲ ಒಂದು ವಿಧದಿಂದ ಮುಳಗಿಸದೆ ಬಿಡರು ಎಂಬ ಭಯವನ್ನಿಟ್ಟುಕೊಂಡೇ ಬದುಕಬೇಕು. ಆಗ ರಾಜಕೀಯವೂ ಸಪ್ಪೆಯಾಗುವುದಿಲ್ಲ. ಹಾಗೆ ಸಪ್ಪೆಯಾಗಿರುವುದಾದರೆ ಡೆಮಾಕ್ರಸಿ ಯಾವ ಮಣ್ಣಿಗೆ!

ಅಮೆರಿಕದ ಜನ ಎಲ್ಲಿ ಬಾಂಬು ಬೀಳುತ್ತದೋ ಎಂದು ಮುಂಜಾಗ್ರತೆ ವಹಿಸಿ ಸಿದ್ಧರಾಗುತ್ತಿರುವಂತೆ ನಾವು ಕೂಡ-ನಮ್ಮವರೇ ಆದರೂ-ಯಾವ ಗುಂಪು ಯಾವಾಗ ಬಂದು ನಮ್ಮ ಹಿತಕ್ಕೆ ಸಂಚುಕಾರ ತರುತ್ತಾರೋ ಎಂದು ಎಚ್ಚರಿಕೆ ವಹಿಸಿ ತಕ್ಕ ಕಾರ್ಯಕ್ರಮಗಳಿಗೆ ತೊಡಗಬೇಕು. 'ದೊಂಗಲುನ್ನಾರು ಜಾಗ್ರತ'ಎಂಬ ಹಲಗೆಗಳನ್ನು ಕಂಡ ಕಂಡಲ್ಲಿ ತೂಗಹಾಕಬೇಕು. ಒಂದು ಭಾಷೆಯವರು ಇನ್ನೊಂದು ಭಾಷೆಯವರಿಂದ ಒಂದು ಪ್ರದೇಶದವರು ಇನ್ನೊಂದು ಪ್ರದೇಶದವರಿಂದ, ಒಂದು ಜಿಲ್ಲೆಯವರು ಇನ್ನೊಂದು ಜಿಲ್ಲೆಯವರಿಂದ, ಒಂದು ತಾಲ್ಲೊಕು ಹೋಬಳಿ, ಗ್ರಾಮ, ಕೇರಿಯವರು ಇನ್ನೊಂದು ತಾಲ್ಲೋಕು ಹೋಬಳಿ, ಗ್ರಾಮ, ಕೇರಿಯವರಿಂದ ನಡೆಯಬಹುದಾದ ಧಾಳಿಗೆ ಸದಾ ಸಿದ್ಧರಾಗಿರುವಂತೆ ಜನತೆಗೆ ತರಬೇತಿ ದೊರೆಯಬೇಕು. ಆ ತರಬೇತಿಯನ್ನು ಮಹಾತ್ಮಾ ಗಾಂಧಿಯವರ ಜನ್ಮದಿನದಂದು ಪ್ರಾರಂಭಿಸಿದರೆ ಅವರ ಆತ್ಮಕ್ಕೆ ತೃಪ್ತಿಯಾದೀತು!

ಎಂದು ನಂಬಿರುವ.............................ರಾಮಿ.

— ರಾಮಿ.

— o —

**ಹಾದಿಯಲ್ಲಿ ಕೇಳಿಸಿದುದು—**

"ಆಗಲಯ್ಯಾ—ನಾವು ಅವರು ಕೇಳಿದಷ್ಟು ತೆರಿಗೆ ಕೊಡ್ತೇವೆ! ಬೇಕಾದರೆ ತೆರಿಗೆ ಹಿಡುಕೊಂಡೇ ನಮಗೆ ಮಿಕ್ಕ ದುಡ್ಡು ಕೊಡಲಿ!! ಅದಕ್ಕೆ ಸರಿಯಾದ ವರಮಾನ ಕೊಡಲಿ!!!"

ಪ್ರಾಯಶಃ N. G. O. ಗಳ ಹೊಸ ಉಪಾಯ!

**ವೈದ್ಯರಲ್ಲಿ ವಿಷನಿಮಿಷಗಳು—**

"ಡಾಕ್ಟರೇ — ಆರೋಗ್ಯವೇ?"

— "ಕೇಳು".

# ಪ್ರತಾಪ ಪುಟ್ಟಣ್ಣಯ್ಯ

ಒಂದೇ ಕ್ಷಣ ತಬ್ಬಿಬ್ಬಾದ ಕಾಡುಪಾಪನಂತೆ, ಕಂಗೆಟ್ಟ ಕಾಕೋದರನಂತೆ, ಬೆಪ್ಪಾದ ಬುದ್ದೂವಿನಂತೆ, ನಿಂತೆ. ಪುಟ್ಟಣ್ಣಯ್ಯನವರೇನೋ ತಮ್ಮ ರೂಮಿನಲ್ಲಿದ್ದರು....ಆದರೆ ಅವರ ಆಗಿನ ಅವಸ್ಥೆ, ಅಂಗ ಸಾಧನೆಯೋ—ಅವರ ಅಂತರಾತ್ಮ ಪ್ರೇರಣೆಯೋ, ಪ್ರಾರಬ್ಧ ಕರ್ಮದ ಕುಚೇಷ್ಟೆಯೋ, ಅಥವಾ ಅಪ್ರತಿಮ ಪ್ರತಿಭೆಯ ಅತಿರೇಕ ಪ್ರಚೋದನೆಯೋ ಒಂದೂ ಅರ್ಥವಾಗಲಿಲ್ಲ. ಆ ಒಂದು ಕ್ಷಣ ನಾನು ಮಂಕುಹಿಡಿದ ಮೂದೇವಿಯಂತೆ ಮುಗಿದ ಕೈ ತೆಗೆಯದೆಲೇ ಮುಂಬಾಗಿಲ ಮುಂದೆ ನಿಂತಿದ್ದೆ.

ಪುಟ್ಟಣ್ಣಯ್ಯನವರು ನಿಂತಿದ್ದರು. ತಲೆ ಕೆಳಗೆಮಾಡಿ ಕಾಲು ಮೇಲೆ ಮಾಡಿ ಶಿರಸಾಸಮುಂಡಿತ ಪಂಡಿತರಂತೆ ನಿಂತಿದ್ದರು. ನನ್ನನ್ನು ನೋಡಿದೊಡನೆ ಹಾಗೇ ಕೈ ಜೋಡಿಸಿ—

"ಕುಬೇಡ್ರಕೂ ದುಂಬ" ಎಂದರು.

ನನ್ನ ತಲೆ ಒಮ್ಮೆಲೇ ತಿರುಗಿ, ಬೀಳುವಂತಾದೆ. ಕಣ್ಣಿಗೆ ಭೋಳಿ ಬಂತು. ಹಾಗೇ ನಿಂತಿದ್ದೆ. ತಳಕೆಳಕಾಗಿ ನಕ್ಕರು. ಕೈಮಾಡಿ ಕುರ್ಚಿ ತೋರಿಸಿದರು. ಕುಕ್ಕುರಿಸಿದೆ.

"? ವೆಲ್ಲಲಿಗವಾರ್ಥಅ ತುವಮಾ ಕೆಯಾ!" ಎಂದರು.

"ಇದೇನು ಪುಟ್ಟಣ್ಣಯ್ಯನೋರೇ......" ಎಂದು ಕೇಳಿದೆ. ಅಂತರಿಕ್ಷದತ್ತ ಇದ್ದ ಕಾಲನ್ನು ಕೆಳಗಿಳಿಸಿ ಕಾಲಮೇಲೇ ನಿಂತು ಕಣ್ಣುಜ್ಜಿ ನನ್ನ ಪಕ್ಕದ ಇನ್ನೊಂದು ಕುರ್ಚಿಯನ್ನೇರಿದರು ಶ್ರೀವರ್ರಾ ಪುಟ್ಟಣ್ಣಯ್ಯನವರು.

" ಯಾಕಯ್ಯ ಹೀಗೆ ಆಡ್ತಿಯಾ ಮೈಲಿ ಸ್ವಸ್ಥವಿಲ್ಲವೆ ? ಎಂದು ನನ್ನೇ ಕೇಳಿದರು

–ನನಗೊಂದು ಮಾತು ಆಡಲು ತೋಚದೆ ಬರೀ ಉಗಳು ನುಂಗಿದೆ....ಆಡಲೇ ಬೇಕಾದ ಮಾತೂ–ಇಲ್ಲಿಗೆ ಬರಲೇ ಬೇಕಾದ ಪ್ರಸಂಗವೂ ನೆನಪಿಗೆ ಬಂದು-ಶ್ರೀಯುತರು ಯಥಾಸ್ಥಿತಿಗೆ ಇಳಿದದ್ದೂ ನನ್ನಿಂದ ಮಾತು ಹೊರಡಿಸಿತು.

" ತಮ್ಮನ್ನ ನೋಡಬೇಕಾಗಿತ್ತು........ "

" ವಿಶಯವೇನು ? "

" ನಾಳೆ ನಮ್ಮ ಸುಧಾಮ ಸಾಹಿತ್ಯ ಸಂಘದ ವಾರ್ಷಿಕೋತ್ಸವ....ತಾವೂ "

" ಸಾಧ್ಯವಿಲ್ಲ-ನನಗೆ ಬಿಡುವಿಲ್ಲ-ನಾಳೆ ಬೆಳಗ್ಗೆಯಿಂದ ನಾಡಿದ್ದು ಸಂಜೆವರಿಗೆ ಎಂಟು ಸಭೆಗಳಿಗೆ ನಾನು ಹೋಗಿ ಭಾಷಣ ಮಾಡಬೇಕು. ಸಾಧ್ಯವಿಲ್ಲ ಅಧ್ಯಕ್ಷತೆ ವಹಿಸೋದು ಸಾಧ್ಯವಿಲ್ಲ "

" ಅದಕ್ಕಲ್ಲ........ "

"ಮತ್ತೆ ?"

"ಅದಕ್ಕೆ ತಾವು ಹೋದ ಸಾರಿ ಬಂದಾಗ ಚಂದಾ ಹಣಕ್ಕೆ ಒಪ್ಪಿದ್ದಿರಿ—ಬಾಕಿ ಹನ್ನೊಂದಾಣೆ ಇದೆ ಬೇಕಿತ್ತು...."

"ಹನ್ನೊಂದಾಣೆ ?....ಅದ್ಯಾವಲೆಖ್ಖ"

"ಸುಧಾಮ ಸಾಹಿತ್ಯ ಸಂಘವಾದ್ದರಿಂದ ಕೇವಲ ಒಂದಾಣೆ ತಿಂಗಳಿಗೆ ಚಂದಾ ....ತಮ್ಮದು ಹನ್ನೊಂದು ತಿಂಗಳದ್ದು ಬಾಕಿ ಇದೆ."

"ಓ ಹೋ —ಅಷ್ಟೆಯೋ " ಎಂದು ಜೇಬಿಗೆ ಕೈಹಾಕಿದರು. ಸಧ್ಯ ಕರಡು ಬಾಕಿ ಬಂತಲ್ಲಾ ಎನ್ನುವ ತೃಪ್ತಿ ಪಡೆಯಲೇ ಇಲ್ಲ ನಾನು. ಅವರು ಜೇಬಿನಿಂದ ತೆಗೆದದ್ದು ಒಂದು ಇಸ್ಪೀಟು ಪ್ಯಾಕು-ಅದನ್ನ ತೆಗೆದು ಕಲಸ ತೊಡಗಿದರು.

" ಸ್ವಲ್ಪ ಕಾದಿರು ಈಗ ನಮ್ಮ ಸೀನು ಬರ್‍ತಾನೆ ಅವನ ಹತ್ತಿರ ನಾಲ್ಕಾಟಾ ಆಡಿ ಗೆದ್ದು ನಿನ್ನ ಸುಧಾಮನಿಗೆ ಸಹಾಯ ಮಾಡ್ತಿನಿ " ಎಂದರು.

" ಸರಿ ಸಾರ್ ಕಾದಿರ್‍ತೇನೆ....ಮತ್ತೇ ಒಂದು ವಿಚಾರ ಕೇಳಬೇಕೂಂತ.... "

" ಕೇಳಪ್ಪ ಅದಕ್ಕೇನು!"

" ನಾನು ಬಂದಾಗ ತಾವು ಶಿರಸಾಸನ ಪೀಡಿತರಾಗಿದ್ದಿರೀ........ "

" ಹೌದು ಅದು ನಮ್ಮ ನಿತ್ಯದ ಅಭ್ಯಾಸ ಅದರಿಂದ ನಿನಗೇನು ತೊಂದರೆ ? "

" ಹ ಹ....ತೊಂದರೆ ವಿಷಯಕ್ಕಲ್ಲಾ ಆ ಸ್ಥಿತಿಯಲ್ಲಿ ತಾವು ಏನೋ ಹೇಳಿದಿರಿ ಅದು ಅರ್ಥವಾಗಲಿಲ್ಲ........ "

" ಓ ಹೋ ಅದೋ ... ಅದು ಗೊತ್ತಾಯ್ತು ನಿನಗೆ ಅರ್ಥವಾಗ್ಲಿಲ್ಲಾಂತ ಅದು ತಿಳಿಯಬೇಕಾಗಿದ್ದರೆ ನೀನು ತಲಕೆಳಗಾಗಿ ನಿಲ್ಲಬೇಕು "

" ಅಂದರೆ ? "

" ಅದೂ ತಿಳಿಯದ ಮೂಢನಯ್ಯ ನೀನು ತಳಕೆಳಗಾಗಿದ್ದಾಗ ಮಾತು ತಳ ಕೆಳಗಾಗಿ ಹೊರಬೀಳೋಲ್ವೆ ? "

" ಅಂ " ಎಂದು ಅವಕ್ಕಾಗಿ ಬಾಯಿ ಬಿಟ್ಟು ಕಸವಿಸಿ ಪಟ್ಟೆ.

" ಈ ಗುಟ್ಟು ಬಹಳ ಜನಕ್ಕೆ ಗೊತ್ತಿಲ್ಲ....ನಾನೂ ಕೂಡ ಕಲಿತದ್ದು ಮಿಲಿಟರಿ ಬಿದ್ದಾಗ ಕರ್ನಲ್ ಕಿತಾಪರೆನ್ ಎಂಬ ಅಂಗ್ರೇಜಿ ಅವನಿಂದ. "

" ಕಿತಾಪರೆನ್ ........ಯಾವೊನೋ ಈಕಡೆಯವನೆ ಅಂಗ್ರೇಜಿಯವನಾಗಿರ ಬೇಕು "

" ಅದೇ ಅವನೆಲ್ಲಿಯವನಾದರೆ ನಿಮ್ಮನೆ ನೆಲ್ಲ ಕಾಯಿಗಿಡಕ್ಕೆ ಬಂದ ಭಾಗ್ಯ ವೇನು ?... ....ಮುಖ್ಯವಾದ ವಿಚಾರದ ಕಡೆ ಗಮನ ಕೊಡು-ಈ ತಳ ಕೆಳಗು ಸಮಾಚಾರವಿದೆಯಲ್ಲ ಅದನ್ನ ಕೇಳು .... ಹತ್ತೊಂಬತ್ತ ನೂರಾ ನಲವತ್ತೆರಡು ನಲವತ್ಮೂರನೆ ಇಸವಿ ಸಮ ನಾನು ಪಂಚಮದಳದಲ್ಲಿದ್ದೆ "

" ಅರೆ ! ಈಗ ಖಾದಿ ಭಕ್ತರಾಗಿದ್ದೀರಿ ಮತ್ತೇ "

" ಅದೇ ತಳ ಕೆಳಗು ವಿಚಾರದ ಮಹತ್ವ...........ಪಂಚಮದಳದವನೊಂದ್ರೆ ಅದೊಂದು ತರಹ....ಅಂಗ್ರೇಜಿಯವರಿಗೆ-ಇಲ್ಲಿನ ಸುದ್ದಿ-ಇಲ್ಲಿನವರಿಗೆ ಅಂಗ್ರೇಜಿ ಸುದ್ದಿ ತಿಳಿಸೋ ಪಂಚಮದಳ........... "

" ಒಂದು ತರಹ ಪಂಚಮರೊನ್ನಿ "

" ನೋಡಪ್ಪಾ- ಅದೇ ನಿನಗೆ ಅರ್ಥವಾಗೊಲ್ಲಾನ್ನೊದು........ನಾವುಗಳೆಲ್ಲಾ ಹಾಗೆ ಆಗ ಚಾಕ ಚಕ್ಯತೆ ತೊರ್ಸಿದಿಂದ್ಲೇ ಈಗ ನಮಗೆ ಸ್ವರಾಜ್ಯ ಬಂದಿರೋದು.... ಇಲ್ನೋಡಪ್ಪಾ ನೀನು ಮಾತ್ನಿಂದ ಮಾತಿಗೆ ಎಳಿತೀಯ, ಈಗ ಮುಖ್ಯ ವಿಚಾರ ಯಾವುದು ?

" ತಳ ಕೆಳಗು ಮಾತಿನ ವಿಚಾರ "

" ಹೌದು ತಾನೆ........ಅದರ ಮಟ್ಟಿಗೆ ಹೇಳ್ತೀನೆ ಕೇಳು........ಆ ಕ್ಯಾಪ್ಟನ್ ಕಿತಾಪರೆನ್ ಇದ್ದನಲ್ಲಾ ನಾನೂ ಅವನೂ ಗಳಸ್ಯ ಕಂಠಸ್ಯ........ಬಾಲ್‌ರೂಮ್ ಡ್ಯಾನ್ಸ್ ನಡಿತಾ ಇರೋದು.-ದೊಡ್ಡ ದಡ್ಡ ಆಫೀಸರುಗಳೆಲ್ಲಾ ಇರೋದು ನಾವು ಅತ್ಯಂತ ಗೂಢವಾದ ವಿಚಾರ ಮಾತಾಡ್ಕೊಳ್ಳೊ ಸಂದರ್ಭ ಇರೋದು... ... ಆಗೇನು ಮಾಡೋದು ? ಗುಟ್ಟು ಗುಟ್ಟಾಗಿ ಕಿವಿಲಿ ಮಾತಾಡಿ ಕೊಂಡ್ರೆ ಹತ್ತೂ ಜನ ಏನು

ತಿಳ್ಕೊಂಡಾರು ?...........ನಾವೋ ವಿಚಾರ ಮಾತಾಡ್ಲೇ ಬೇಕು....... . ಆಗೇನು ಮಾಡೋದು ?....ಸರಿ ಹೀಗೆ ಗೋಡೆಗೆ ಇಬ್ರೂ ಶಿರಸಾಸನ ಹಾಕಿ ಎದುರು ಬದುರು ತಲೆ ಮೇಲೆ ನಿಲ್ಲುತಿದ್ವಿ........"

"....ಹ ಹ ಹ....ಸರಿ ಆಮೇಲೆ ?"

"ಡ್ಯಾನ್ಸ್ ಮಾಡ್ತಿದ್ದ ಗಂಡು ಹೆಣ್ಣುಗಳೆಲ್ಲಾ ಅದೇನು ತಮಾಷೇಂತ ನೋಡೋವು—ನಮಗೇನು ನಮ್ಮ ಕರ್ತವ್ಯ ಮುಖ್ಯ ಸರಸರಾಂತ ಹರಟೋವು—ಸೇರಿದವರೆಲ್ಲಾ ಸುಸ್ತು—ನಮ್ಮಿಬ್ಬರಿಗೆ ಮಾತ್ರ ಮಾತು ಸೊಗಸಾಗಿ ಗೊತ್ತಾಗೋದು...."

"ಅದು ಹ್ಯಾಗೆ ಸ್ವಾಮೀ ಇಬ್ಬರಿಗನ ತಳಕೆಳಗು ಭಾಷೆ ಕರತಲಾಮಲಕವಾಗಿರಬೇಕು."

"ಅದ್ಯಾಕೇ....ನಾವು ನಾವು ಮಾತಾಡೋವಾಗ ಕೇಳುವವರಿಗೆ ತಳಕೆಳಗಾಗಿ ಕೇಳುತ್ತೆ ನಮ ನಮಗೆ ನೇರವಾಗೇ ಕೇಳುತ್ತೆ...."

"ಹೌದೆ ?"

"ಹೌದು—ಮೈನಸ್ ಇಂಟು ಮೈನಸ್ ಪ್ಲಸ್ ಅಲ್ಲವೆ ?"

"ಹೌದು"

"ಮತ್ತೆ....ಲೆಕ್ಕ ಸರಿಹೋಗಲಿಲ್ವೆ ?....ಬೇಕಾದರೆ ನಿನಗೇ ಈಗ ಅದನ್ನ ಖಚಿತಪಡಿಸ್ತೀನಿ.... ಎಲ್ಲಿ ಬಾ ಇಲ್ಲಿ....ಕೋಟು ಬಿಚ್ಚಿಡು....ಇಲ್ಲಿ ತಾ ನಾನು ಇಟ್ಕೊಂಡಿರ್ತೀನಿ....ಹಾಗೇ....ಎಲ್ಲಿ ಈ ಮೂಲೇಲಿ ನಿಂತ್ಕೊ ತಲೆಕೆಳಗ ಈ ಟೌಲು ಹಾಕ್ಕೊ ಹಾಗೇ ೯....ಹಾಂ ಸರಿ—ಹುಂ ಕಾಲು ಮೇಲಕ್ಕೆ ಎಗರ್ಸು....ನಾನಿದ್ದೀನಿ ಹೆದರಬೇಡ—ಹಾಗೇ ವಾಲಬೇಡ ಕೈ ಭದ್ರವಾಗಿ ಊರಿ ಬ್ಯಾಲೆನ್ಸ್ ಮಾಡು....ರೈಟೋ....ಹಾಗೇ ನಿಂತಿರು."

—ನನ್ನ ತಲೆಗೆಲ್ಲಾ ರಕ್ತ ಹೆಚ್ಚು ಹರಿದು ಭಾರವಾಗಿ ಒಂದು ನಮೂನೆ ವಿಚಿತ್ರ ವೇದನೆಯಾಯಿತು....ಆದರೂ ಪ್ರಯತ್ನಪಟ್ಟು ರಾಮಾ ಎಂದೆ. ಅವರು 'ಮರಾ' ಎಂದರು. ನಾನು ತಳಕೆಳಗಾಗಿದ್ದರಿಂದ ಹಾಗೆ ಕೇಳಿರಬೇಕೆಂದು ತರ್ಕಿಸಿದೆ. ಆ ವೇಳೆಗೆ ಸೀನಪ್ಪನವರು ಬಂದರು. ನನ್ನನ್ನು ಹಾಗೇ ಬಿಟ್ಟು—

"ಸೀನೂ ಬಾ...." ಎಂದು ಇಬ್ಬರೂ ಆಟಕ್ಕೆ ಕೂತರು. ಪುಟ್ಟಣ್ಣಯ್ಯನವರು ನನ್ನ ಜೇಬಿಂದ ಸಂಘದ ಚಂದಾ ತೆಗೆದು ಸೋಲತೊಡಗಿದರು ಹಾಗೇ

ಕೂಗಿದೆ "ಸ್ವಾಮಿಾ ನನ್ನ ಕೋಟು ಜೇಬಿನ ಹಣ ಸೋಲ್ತಿದೀರಿ" ಎಂದು. ಅವರು "ಮಗೂ ಅದು ನನ್ನ ಜೇಬು ನೀನು ತಳಕೆಳಗಾಗಿ ನೋಡ್ತಿರೋದರಿಂದ ನಿನ್ನ ಜೇಬಿನ ಹಾಗೆ ಕಾಣುತ್ತೆ" ಎಂದು ಉತ್ತರಿಸಿದರು.

ಸೀನಪ್ಪ ನನ್ನ ಕೂಗು ನೋಡಿ, "ಇದ್ಯಾರಯ್ಯಾ ಹೊಸ ಪ್ರಾಣೀ" ಎಂದರು.

"ಅದೇ ಸುಧಾಮ ಸಾಹಿತ್ಯ ಸಂಘದ ಸೆಕ್ರಿಟ್ರಿ–ಆ ಸಾಹಿತ್ಯ ಸಂಘವನ್ನು ಸಂಯಮ:ದಿಂದ ತೂಗಿಸೋಕೆ ಸಾಧನೆ ಏನು ಎಂದ–ಶಿರಸಾಸನ ಮಾಡು ಅಂದೆ ಹಾಗೆ ನಿಂತಿದ್ದಾನೆ-ಅಷ್ಟೆ"

–ಎಂದದ್ದು ಕೇಳಿದೊಡನೆ–ಧೊಪ್ಪನೆ ಹಾಗೆ ಕಾಲು ನೆಲಕ್ಕೆ ಬಿತ್ತು.

ಪ್ರತಾಪ ಪುಟ್ಟಣ್ಣಯ್ಯನವರಿಂದ ಕೋಟು ವಾಪಸ್ಸು ಪಡೆದು ಬರಬೇಕಾದರೆ ಕಣ್ಣಲ್ಲಿನ ನೀರು ಕಪಾಳಕ್ಕಿಳಿಯಿತು. ಹೊರಕ್ಕೆ ಬಂದಾಗ ಜಗ್ಗಾಟದಲ್ಲಿ ಕೋಟಿನ ಕಿಸೆ ಹರಿದಿತ್ತು-ಕಿಸೆಯಲ್ಲಿನ ಕಾಸು ಮಾಯವಾಗಿತ್ತು....ಕೇಳಿ ಬಂದದ್ದು ಕೆಟ್ಟಾದಾದ ಅಲೆ ಅಲೆಯಾದ ಪುಟ್ಟಣ್ಣಯ್ಯನವರ ನಗು—ಪುಟಿಪುಟಿದು ಬಂದು ಎದೆಯಿರಿವಂತೆ ಬರುತಿತ್ತು. ಓಡಿ ಹೋದೆ ಸಧ್ಯ ಕೋಟು ಸಿಕ್ತಲ್ಲಾಂತ. ಆದರೂ ಕೇಳಿ ಬಂತು "ಸ್ನಿ‌ಬ ಸ್ನಿ‌ಬ" ಎಂದು ಶಬ್ದ.

|| ಹರಿ ಹೊಂ ಸುಸ್ತು ||

—ದಾಶರಥಿ ಧೀಕ್ಷಿತ್



# ★ ಸೂಯಜ್ ಗಾದೆಗಳು ★

ಸಾವಿರ ಒಂಟಿ ಸರದಾರನಾದರೂ—ಮೆನನ್ ಮಾತಿಗೆ ಖಾಸ್ದಾರ!

* * *

ಇರಳು ಕಂಡ ಕಾಲುವೆಯಲ್ಲಿ—ಹಗಲಲ್ಲೇ ಮುಳಗಿದರಂತೆ.

* * *

ರೀತಿ ತೋರಿಸುಕ್ಕೆ ಮೆನ್ಜೀಸ್ ಕರೆಸಿದರೆ–ಆತ ಒದಸಿಕೊಂಡು ಆರು ದಿನಗಳ್ತಾಯಂತೆ

* * *

ಅಂಗ್ಳೈ ಕಾನೂನಿಗೆ ಆಂತೋನಿ ಕನ್ನಡಿಯೇ!

* * *

ಬಿಟ್ಟ ಮೇಲೆ ಸೂಯಜ್ ನಡೆಯಿತು—ಕೆಟ್ಟ ಮೇಲೆ ಬುದ್ಧಿ ಬರುತ್ತ್ಯೇ?

* * *

ಮಣಿಯಲಾರದ ಸೂಯೆಜ್—ಮದದವರನ್ನು ದೂಷಿಸುತ್ತಾಳೆಯೇ!

* * *

ಒಂದಲ್ಲ ಎಲಿಸ ಬತ್ತಿಗೆ—ಕಾಲುವೆಯುಲ್ಲಾ ಕಾನೂನುಮಯ!

* * *

ರಾತ್ರಿಯೆಲ್ಲಾ ಯು. ನೋ. ಅಂದೂ ಅಂದೂ– ಬೆಳಗಾಗುತ್ತಲೂ
"ಯು ಡೋಂಟ್ ನೋ" ಎಂದಂತೆ

* * *

ಇತ್ತಲಾಗಿ ಬಾ ಎಂದರೆ—ಸುತ್ತಿಕೊಂಡೇ ಹೋಗುತ್ತೇನೆ ಎಂದರಂತೆ.

* * *

ತಪ್ಪನ್ನ ತಪ್ಪು ಎನ್ನದವನು,—ಇನ್ನೊಬ್ಬರಿಗೆ ಒಪ್ಪು ಎಂದಾನೇ!

* * *

ಶ್ರೀ ಡಲ್ಲಸ್ಸಿಗೆ;–ಎಣ್ಣೆ ಬರುವ ಹೊತ್ತಿಗೆ–ಸೂಯೆಜ್ ಕಣ್ಣು ಮುಚ್ಚಿಕೊಂಡಿತಂತೆ

* * *

ಕದನವಾಡೋಣ ಬಾರೋ ಎಂದರೆ—ಡಲ್ಲೇಶನೇ ನಿನ್ನ ಮಿಂಡ ಅಲ್ಲ ಎಂದರಂತೆ

* * *

ಅಷ್ಟಕ್ಕೆ ಜಗ್ಗದ ಬಡ್ಡಿ—ಸೂಯೆಜ್ ದಾಟಾಳೆ!

* * *

ಲೇಬರ್ ಸಲಹೆ ಮದ್ದಲ್ಲವಂತೆ!

* * *

ತಂದೆಯಂತೆ ಮಗ— ಅಂದಿನಂತೆ ಆಂಥೋನಿ
ತಾಯಿಯಂತೆ ಮಗಳು—ನೂಲಿದಂತೆ ನಾಸರ್!

* * *

---

# ಪ್ರಾಣೇಶ ಪ್ರಸಂಗ

## ಪ್ರಾಚ್ಯ ಸಂಶೋಧನೆ

ಕನ್ನಡ ಮಾತೃಭಾಷೆ, ಹಿಂದೀ ರಾಷ್ಟ್ರಭಾಷೆ, ಇಂಗ್ಲೀಷು ಅಂತಾರಾಷ್ಟ್ರೀಯ ಭಾಷೆ, ಸಂಸ್ಕೃತವಂತೂ ದೇವಭಾಷೆ ಆದ್ದರಿಂದ ನಮ್ಮ ಹುಡುಗರೆಲ್ಲ ನಾಲ್ಕೈದು ಭಾಷೆಗಳನ್ನು ಕಲಿಯಬೇಕೆಂದು ಮುಂದಾಳುಗಳು ಹೇಳುವುದು ಕೇಳ ಬರುತ್ತಿದೆ. ಹಾಗೆಯೇ ಇನ್ನು ಕೆಲವರು ನಮಗೆ ಸಂಗೀತ ಸಾಹಿತ್ಯ, ಶಿಲ್ಪ, ಶಿಲ್ಪಕಲೆ, ಇನ್ನೊಂದು ಮತ್ತೊಂದು ಹೀಗೆ ಎಲ್ಲವೂ ತಿಳಿದಿರಬೇಕು ಎನ್ನುತ್ತಾರೆ. ತಜ್ಞರು ಹೇಳುವುದು ಸರಿಯಿರಬೇಕು. "ಅಷ್ಟು ಮಾತ್ರವಲ್ಲ ಕಣಯ್ಯ ನಾವು ತಿಳಿದಿರತಕ್ಕದ್ದು ಇನ್ನೂ ಬೇಕಾದಷ್ಟಿದೆ" ಎಂದು ಪ್ರಾಣೇಶ ತನ್ನ ಪತ್ರವನ್ನು ಬಹಳ ಗಂಭೀರವಾಗಿ ಪ್ರಾರಂಭಿಸಿದ್ದನ್ನು ಕಂಡು ನನಗೊಮ್ಮೆ ದಿಗಿಲಾಯಿತು. "ನಮ್ಮ past ನ ಕುರಿತು ಕೂಡ ನಮಗೆ ಸ್ಪಷ್ಟವಾಗಿ ತಿಳಿದಿರಬೇಕು. ದೈವೇಚ್ಛೆಯೆಂದು ಕಾಣುತ್ತದೆ. ಇದ್ದಕ್ಕಿದ್ದ ಹಾಗೆ ಸಂಶೋಧನೆಯಲ್ಲಿ ಆಸಕ್ತಿ ಹುಟ್ಟುವ ಸಂಧರ್ಭವೊಂದು ನನಗೊದಗಿದೆ. ಈಗಾಗಲೇ ಸಾಧನೆಗೆ ಪ್ರಾರಂಭಿಸಿದ್ದೇನೆ. ಹೆಚ್ಚಿನ ವಿವರ ಮುಂದಿನ ಪತ್ರದಲ್ಲಿ (ಇವಳಾಗಲೇ ಪೆನ್ನು ಕಿತ್ತುಕೊಳ್ಳಲು ತೊಡಗಿರುವುದರಿಂದ ಮುಂದೆ ಬರೆಯುವುದು ಅಸಾಧ್ಯ) ಅಂದ ಹಾಗೆ, ಸಂಶೋಧನೆ ಕುರಿತು ನಿನ್ನ ಅಭಿಪ್ರಾಯವೇನು ?" ಎಂದು ಪ್ರಾಣೇಶ ತನ್ನ ಪತ್ರವನ್ನು ಮುಗಿಸಿದ್ದ.

ನಾನೂ ತಡವಿಲ್ಲದೆ ಉತ್ತರ ಬರೆದೆ. "ನನ್ನ ಅಭಿಪ್ರಾಯವೇನಪ್ಪ! ಮಹಾ ಮಹಾ ಪಂಡಿತರು ತಮಗಾಗಿ ಮೀಸಲಾಗಿಟ್ಟುಕೊಂಡಿದ್ದ ವಿಷಯಗಳನ್ನು ಈ ಸಮಾಜವಾದಿಯುಗದಲ್ಲಿ man-in-the street-ಕೂಡ ತನ್ನದನ್ನಾಗಿ ಮಾಡಿಕೊಳ್ಳಬೇಕಾದ್ದು ಸಹಜವೇ. ಆದ್ದರಿಂದ ನಿನಗೂ ಸಂಶೋಧನೆ ನಡೆಸುವ ಹಕ್ಕಿದೆ, ಮಂತ್ರಿಯಾಗುವ ಹಕ್ಕಿದ್ದಂತೆಯೇ. ಆದ್ದರಿಂದ ಎಲ್ಲ ಸಂದೇಶದಾತರಂತೆ ನಿನಗೆ ನಾನು wish you suceess ಎನ್ನಲು ಕಷ್ಟವಿಲ್ಲ. ಆದರೆ ಒಂದು ಮಾತು. ನೀನು ಹೇಳುವ ಹಾಗೆ 'past' ನ ಕುರಿತು ನಾವು ಎಷ್ಟು ಹೆಚ್ಚು ಹೆಚ್ಚಾಗಿ ತಿಳಿಯಲು ಪ್ರಯತ್ನಿಸುತ್ತೇವೋ ಅಷ್ಟಷ್ಟೂ ಮಟ್ಟಿಗೆ ಒಂದು ವಿಷಯವಂತೂ ಹೆಚ್ಚು ಸ್ಪಷ್ಟವಾಗುತ್ತೆ ಮನುಷ್ಯ ಒಮ್ಮೆ ಲಾಂಗೂಲವಂತನಾಗಿದ್ದ. ಲಾಂಗೂಲ ಹೋಗಿ ಆತ ಇಷ್ಟು ಬದಲಾಯಿಸಿದಂತೆ ಕಂಡರೂ ಅವನ ಮೂಲ ಸ್ವಭಾವ ಬುದ್ಧಿ, ಗುಣ, ನಡತೆಗಳಲ್ಲಿ ಮಹಾ ಬದಲಾವಣೆಯೇನೂ ಆಗಿಲ್ಲ. ಆ ಮಟ್ಟಿಗೆ past ಏನು present ಏನು"-ಎಂದೆಲ್ಲಾ ಬರೆದಿದ್ದೆ.

ಎರಡು ದಿನಗಳ ಮೇಲೆ ಇನ್ನೊಂದು ಕಾಗದ ಬಂತು. ಪ್ರಾಣೇಶನಿಂದಲ್ಲ; ಅವನ ಹೆಂಡತಿಯಿಂದ. "ಅಣ್ಣಾ, ನೀವು ಬರೆದ ಹಾಗೆ ಲಾಂಗೂಲವಂತನಾಗಿದ್ದಾಗಿನಿಗಿಂತ ಇಂದಿನ ಮನುಷ್ಯನ ಗುಣಗಳಲ್ಲಿ ಹೆಚ್ಚಿನ ಬದಲಾವಣೆಯಾಗಿಲ್ಲ ಎಂಬುದು ನಿಜ" ಎಂದು ಪ್ರಾರಂಭಿಸಿದ್ದಳು. ಪತ್ರ ಓದಿ ಮುಗಿಸಿದ ಮೇಲೆ ಬಲು ದಿಟ್ಟೆಯಮ್ಮ ನೀನು ಎಂದುಕೊಂಡೆ. ಪ್ರಾಣೇಶ ನಡೆಸಿದ್ದ ಸಂಶೋಧನೆಯ ಸಂಪೂರ್ಣ ವಿವರ ಅದರಲ್ಲಿತ್ತು. ಆದರೆ ಪ್ರಾಣೇಶನ ಪತ್ರವೇ ಇಲ್ಲ!

ಪ್ರಾಣೇಶನ ಸಂಶೋಧನಾ ಸ್ಫೂರ್ತಿ ತೊಡಗಿದ್ದು ಹೀಗೆ. ನೆಂಟರಿಷ್ಟರ ಮನೆಗೆ ಓಡಾಡಿ ಬರುವುದರ ಹೊರತು ಬೇರೇನೂ ಕೆಲಸವಿಲ್ಲದೆ ಹೆಂಡತಿಯೊಡನೆ ಹರಟೆ ಬಡಿದು ಹುಡುಗರೊಡನೆ ಪಗಡೆ ಆಡಿ ಸೋಲುತ್ತಿರುವುದರ ಜೊತೆಗೆ ಪ್ರಾಣೇಶನಿಗೆ ಈ ಚಪಲವೂ ಮೂಡಿದುದು ಆಶ್ಚರ್ಯವಲ್ಲ. ಹಿಂದೊಮ್ಮೆ ಆತ ರಾಮಾಯಣದ ಸನ್ನಿವೇಶವೊಂದನ್ನು ಅನಾಮತ್ತಾಗಿ ಎತ್ತಿಕೊಂಡು ತುಂಡು ಕಾವ್ಯ ಬರೆದು ಬಿಡುತ್ತೇನೆಂದು ತೊಡಗಿ ವಾಲ್ಮೀಕಿಯ ಆತ್ಮಕ್ಕೆ ಗೋಳುಕೊಡಲಿಲ್ಲವೆ? ಇದು ಅಂಥಾದ್ದೇ ಇನ್ನೊಂದು ಸಾಹಸ

ಸಂಜೆ ಹೊತ್ತಿಗೆ ಪ್ರಾಣೇಶ ಹೆಂಡತಿಯೊಡನೆ ಅಡ್ಡಾಡಿ ಬರಲು ಹೊರಟಿದ್ದ. ಹಾಗೆಯೇ ಗಂಗಾಧರೇಶ್ವರಸ್ವಾಮಿ ಗುಡಿಗೆ ಪ್ರದಕ್ಷಣೆ ಬರುತ್ತಿರುವಾಗ ಅಲ್ಲಿಯ ಪಕ್ಕದಲ್ಲೇ ಒಂದು ಕಲ್ಲು ಹಲಗೆ ಬಿದ್ದಿರುವುದು ಕಾಣಿಸಿತು ಪ್ರಾಣೇಶ ಕುತೂಹಲಗೊಂಡು ಹತ್ತಿರ ಹೋಗಿ ಅದನ್ನು ಪರೀಕ್ಷಿಸಿದ. ಅದರಲ್ಲಿ ಏನೋ ಅಕ್ಷರಗಳನ್ನು ಕೊರೆದಿದ್ದಂತೆ ಕಾಣಿಸಿತು. ಆದರೆ ಮಣ್ಣು ಕೆಸರು ಮೆತ್ತಿಕೊಂಡಿತ್ತಾದ್ದರಿಂದ ಯಾವುದೂ ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ಅರ್ಚಕರನ್ನು ವಿಚಾರಿಸಿದಾಗ "ಏನೋ ಹಳೇದೊಂದು ಬೋರ್ಡು ಸ್ವಾಮಿ"– ಎಂದು ಬಿಟ್ಟರು. ಆದರೆ ಪ್ರಾಣೇಶನಿಗೆ ಅದರಿಂದ ಸಮಾಧಾನವಾಗಲಿಲ್ಲ. ಅವನಲ್ಲಿ ಕುತೂಹಲ ಕೆರಳಿತೆಂದರೆ ಕೇಳಬೇಕೆ?

ಸರಿ, ಆ ದಿನ ರಾತ್ರಿ ಪ್ರಾಣೇಶನಿಗೆ ನಿದ್ರೆಯೇ ಹತ್ತಲಿಲ್ಲ. ಆ ಕಲ್ಲು ಚಪ್ಪಡಿ ಯಾವುದೋ ಪುರಾತನ ಶಾಸನವಿರಬೇಕೆಂದೂ, ಮೂಲೆಗೆ ಬಿದ್ದಿರುವ ಅದನ್ನು ಜಗತ್ತಿಗೆ ಪ್ರಕಟಪಡಿಸುವುದು ಅಗತ್ಯವೆಂದೂ, ಒಂದು ವೇಳೆ ಅದು ಅಶೋಕನ ಶಾಸನವೇ ಯಾಕಾಗಿರಬಾರದೆಂದೂ, ಆತ ಮಡದಿಗೆ ಉಪನ್ಯಾಸಕೊಟ್ಟ. ನಮ್ಮ ಜನಕ್ಕೆ ಬುದ್ಧಿಯಿಲ್ಲ; ದೇಶದ ನಾನಾ ಭಾಗಗಳಲ್ಲಿ ಇಂಥ ಅಮೂಲ್ಯ ಶಾಸನಗಳು 'ಎಷ್ಟು ಮೂಲೆಗೆ ಬಿದ್ದಿ'ವೆಯೋ ಏನೋ. ಅವುಗಳ ಉದ್ಧಾರಕ್ಕಾಗಿ ಏಕೆ ತನ್ನ ಜೀವನವನ್ನು ಮುಡುಪಾಗಿಡಬಾರದು ಎಂದು ವಾದಿಸಿದನಂತೆ, ಆಕೆ ತಾಳ್ಮೆಯಿಂದ 'ಬೆಳಗಾಗಲಿ' ಎಂದು ಸೂಚಿಸಿದರೂ ಈತ ಸುಮ್ಮನಿರಲಾರ. ನಾಳೆ ಬೆಳಗ್ಗೆ ಎದ್ದು ಆ ಕಲ್ಲನ್ನು ತೊಳೆಸಿ, ಅಕ್ಷರಗಳು ಸ್ಪಷ್ಟವಾದೊಡನೆ ಅವುಗಳ ಪ್ರಿಂಟ್ ತೆಗೆದು ವಿದ್ವಾಂಸರಿಗೆ ಕಳುಹಿಸಬೇಕು, ಹಾಗೆ ಹೀಗೆ ಎಂದು ಮುಂತಾಗಿ ತನ್ನೊಳಗೆ ಚರ್ಚಿಸಿ

ಕೊಂಡ. ನಡುರಾತ್ರಿಗೆ ದೀಪ ಆರಿಸಿ ಮಲಗಿದ್ದರೆ ಆಗ ಏನಾದರೂ ಒಂದು ಹೊಸ idea ತಲೆಯೊಳಗೆ ಹೊಕ್ಕರೆ ಎಷ್ಟೆಲ್ಲ ಗುಣಾಕಾರ ಭಾಗಾಕಾರಗಳು ಮೂಡುತ್ತವೆ ಎಂದು ಹೇಳಬೇಕೆ. ಸಂಶೋಧನೆಯ ವಿಷಯದಲ್ಲಿ ಪ್ರಾಣೇಶ ಸಿದ್ಧಪಡಿಸಿದ ಪ್ಲಾನುಗಳಿಗೆ ಲೆಕ್ಕವಿಲ್ಲವಾದವು. ಆ ನಿಮಿಷದಲ್ಲಿ ಅವನು ತಾನು ಯಾರೆಂಬುದನ್ನೇ ಮರೆತುಬಿಟ್ಟ. ಸಂಶೋಧನೆಯಲ್ಲಿ ಇಂಥ ಬಲವಾದ ಆಸಕ್ತಿ ಮೂಡಿದ್ದರಿಂದ ನಾಳೆ ಎಲ್ಲಿಯಾದರೂ ಸರಕಾರದವರು ಹಾಳಾದ ಸಂಶೋಧನೆಯ ಡೈರೆಕ್ಟರ ಕೆಲಸವನ್ನು ಗಂಟುಹಾಕಿಬಿಡುತ್ತಾರೋ ಏನೋ ಎಂದೆಲ್ಲ ಚಿಂತಿಸಿದ. ತಲೆ ಬಿಸಿಯೇರಿತು. "ರಾಮಿಗೆ ತಿಳಿಸಿಬಿಡುತ್ತೇನೆ"—ಎಂದು ಥಂಗನೆ ಹಾಸಿಗೆಯಿಂದೆದ್ದು ದೀಪ ಹಚ್ಚಿ ನನಗೆ ಒಂದು ಕಾಗದ ಬರೆಯತೊಡಗಿದ. ಹೆಂಡತಿ ಬಂದು ಪೆನ್ನು ಕಿತ್ತುಕೊಳ್ಳುವ ವರೆಗೂ ಬರೆದ. ಉಪಾಯವಿಲ್ಲದೆ ಎರಡು ಘಂಟೆಗೆ ಮಲಗಿಕೊಂಡರೂ ರಾತ್ರಿಯೆಲ್ಲ ಏನೇನೋ ಕನಸುಗಳು ಹರಪ್ಪಾ ಮೊಹೇಂಜೋದಾರೋ ನಗರಗಳ ಬೀದಿಗಳಲ್ಲಿ ಆಟೋ ರಿಕ್ಷಾವೊಂದರಲ್ಲಿ ಕುಳಿತು ಓಡಾಡಿದೆನೆಂಬ ವಿಚಿತ್ರ ಕನಸೂ ಬಂತು.

ಮಾರನೆ ದಿನ ಪ್ರಾಣೇಶ ಬಲು ಬೇಗನೆ ನಾಷ್ಟಾ ಮುಗಿಸಿ ಇಬ್ಬರು ಹುಡುಗರನ್ನು ಕಟ್ಟಿಕೊಂಡು ಗುಡಿಗೆ ಹೊರಟನಂತೆ; ಹೆಂಡತಿಯನ್ನೂ ಬಾ ಎಂದು ಒತ್ತಾಯಿಸಿದರೆ ಆಕೆ 'ಯಾರಾದರೂ ನಕ್ಕಾರು' ಸುಮ್ಮನಿರಿ ಎಂದಳು. ಪ್ರಾಣೇಶ ಗುಡಿಗೆ ಹೋಗಿ ಅರ್ಚಕರ ಮನೆಯಿಂದ ಕೊಡ ತೆಗೆದುಕೊಂಡು ನೀರು ಹೊರುವಂತೆ ಹುಡುಗರಿಗೆ ಆಜ್ಞಾಪಿಸಿದ. ಹಾಗೆಯೇ ತೆಂಗಿನ ಜುಟ್ಟು ತರಿಸಿ ಕೊಂಚ ಕೊಂಚ ನೀರು ಚಿಮುಕಿಸಿಕೊಂಡು ಶಾಸನದ ಮೇಲೆ ಹತ್ತಿಕೊಂಡಿದ್ದ ಕೆಸರನ್ನು ಉಜ್ಜಿ ತೆಗೆಯುವಂತೆ ಅವರನ್ನು ಪುಸಲಾಯಿಸಿದ್ದಾಯಿತು. ಹುಡುಗರು ಕೂಡ ತುಂಬ ಉತ್ಸಾಹದಿಂದಲೇ ಉಜ್ಜತೊಡಗಿದರು. ಒಬ್ಬನ ಉತ್ಸಾಹವಂತೂ ಮಿತಿಮೀರಿ ಆತ ಕೊಂಚ ಬಲ ವಾಗಿಯೇ ಘರ ಘರ ಎಂದು ಎಂದು ತೀಡತೊಡಗಿದಾಗ ಪ್ರಾಣೇಶ ತಾಳ್ಮೆಗೆಟ್ಟು "ಥೂ ದಡ್ಡ! ಅಷ್ಟು ಬಲವಾಗಿ ಉಜ್ಜಿದರೆ ಅಕ್ಷರಗಳೆಲ್ಲ ಸವೆದುಹೋದಾವು" ಎಂದು ಗದರಿಸಿ ಒಂದು ಏಟುಗೊಟ್ಟ ಸರಿ. ಆತ ಮುಖ ಸಿಂಡರಿಸಿಕೊಂಡು ಮನೆಗೆ ಹೊರಟುಹೋದ. ಇದೇನಪ್ಪ ರಾದ್ಧಾಂತ ಎಂದುಕೊಂಡು ಪ್ರಾಣೇಶನ ಹೆಂಡತಿ ಹೊರಟುಬರುವಂತಾಯಿತು.

ಆ ಹುಡುಗ ಹೊರಟುಹೋದಮೇಲೆ ಉಳಿದೊಬ್ಬನನ್ನು ಪೂಸಿಮಾಡಿ ಉಳಿಸಿ ಕೊಳ್ಳಲು ಪ್ರಾಣೇಶನಿಗೆ ಸಾಕು ಸಾಕಾಯಿತು. ಮಾತ್ರವಲ್ಲದೆ ತಾನೂ ಒಂದು ತೆಂಗಿನ ಜುಟ್ಟು ಹಿಡಿದು ಉಜ್ಜಲು ಪ್ರಾರಂಭಿಸಿದ. ಶಾಸನದ ಮೇಲಿನ ಕೆಸರು ಘಟ್ಟಿಯಾಗಿ ಒಣಗಿದ್ದುದರಿಂದ ಬಡಪೆಟ್ಟಿಗೆ ಕದಲುತ್ತಿರಲಿಲ್ಲ. ಆದರೂ ಪ್ರಾಣೇಶ, apprentice courseನಲ್ಲಿರುವ ಅಗಸ ಗೋಣಿ ಒಗೆದಹಾಗೆ ಉಜ್ಜಿಯೇ ಉಜ್ಜಿದ. ಹೀಗೆ ಒಂದು ಘಂಟೆಯ ಕಾಲ ಉಜ್ಜಿದ ಮೇಲೆ ಒಂದು ಕೈಯಗಲ

ಜಾಗದ ಕೆಸರು ಪೂರ್ತಿ ಕಿತ್ತುಹೋಗಿ ಏನೋ ಅಕ್ಷರಗಳು ಕಾಣಿಸಿಕೊಂಡಾಗ ಪ್ರಾಣೇಶನ ಆನಂದಕ್ಕೆ ಮಿತಿಯುಂಟೆ? ಅಷ್ಟೇ ಭಾಗಕ್ಕೆ ನೀರು ಹಾಕಿ ಚೆನ್ನಾಗಿ ತೊಳೆದಾಗ ಅಕ್ಷರಗಳು ಸ್ಪಷ್ಟವಾದವು. ಆ ಶುಭ ಮುಹೂರ್ತದಲ್ಲಿ ಪ್ರಾಣೇಶನ ಹೆಂಡತಿ ಕೂಡ ಅಲ್ಲಿಗೆ ಬಂದಳು. ಬಚ್ಚಲುಮನೆಯಿಂದ ಕಿರಿಚುತ್ತಾ ಹೊರಟ ಆರ್ಕಿಮಿಡಿಸ್ ಮಹಾಶಯನಂತೆ ಪ್ರಾಣೇಶ ತೆಂಗಿನಜುಟ್ಟು ಆಕಾಶಕ್ಕೆ ಹಾರಿಸಿ "ಇಗೋ ಕನ್ನಡ ಶಾಸನ ಇದು" — ಎಂದು ಕುಣಿದಾಡಿದ. ಗಂ-ಧ-ರೆ-ಶ-ರ— ಮುಂತಾಗಿದ್ದ ಮೊದಲಸಾಲಿನ ಅಕ್ಷರಗಳನ್ನು ಓದಿ ಅದು ಗಂಗಾಧರೇಶ್ವರ ಇರ ಬೇಕೆಂಬ ತನ್ನ ಪಾಂಡಿತ್ಯಜ್ಞಾನವನ್ನು ಪ್ರದರ್ಶಿಸಿದ. ಇನ್ನೇನು, ಹೊಸ ಶಾಸನ ವೊಂದು ದೊರಕಿತೆಂದು ಸಮಸ್ತ ವಿಶ್ವಕ್ಕೆ ಪ್ರಕಟಿಸುವುದೊಂದು ಬಾಕಿ—ಪತ್ರಿಕಾ ಕರ್ತರು, ಫೋಟೋಗ್ರಾಫರುಗಳು, ಬ್ಲಾಕುಗಳು ಹೀಗೇ ಏನೇನೋ ಯೋಚನೆಗಳು ಒಂದುಕ್ಷಣ ಪ್ರಾಣೇಶನ ತಲೆಯನ್ನಾವರಿಸಿದುವು. ಆದರೆ ಎಲ್ಲಕ್ಕಿಂತ ಮುಖ್ಯವಾಗಿ ಶಾಸನದ ಉಳಿದ 9/10ನೇ ಭಾಗದ ಕೆಸರು ತೆಗೆಯಬೇಕಲ್ಲ. ಸರಿ, ಪ್ರಾಣೇಶ ತೆಂಗಿನಜುಟ್ಟು ಹುಡುಕಿ ಅದನ್ನು ಎರಡು ಸೀಳು ಮಾಡಿ ಒಂದನ್ನು ಹೆಂಡತಿಗೆ ಕೊಟ್ಟು 'ಹುಂ' ಎಂದು ಆಕೆಯನ್ನು ಹುರಿದುಂಬಿಸುವುದರಲ್ಲಿದ್ದ. ಅಷ್ಟರಲ್ಲಿ ಅರ್ಚಕರೇ ಅಲ್ಲಿಗೆ ಬಂದರು.

"ಏನು ಕಾರ್ಯಭಾರದಲ್ಲಿದ್ದೀರಿ ಸ್ವಾಮಿ"-ಎಂದು ವೃದ್ಧರು ಕೊಂಚ ಹಾಸ್ಯದ ಧ್ವನಿಯಲ್ಲೇ ಕೇಳಿದರು.

"ಇದೇನೋ ಒಂದು ಪುರಾತನ ಶಾಸನ ಇರೋಹಾಗಿದೆ ಸ್ವಾಮಿ. ಇಂಥವು ಗಳನ್ನು ಅಲಕ್ಷಿಸೋಕಾಗೊಲ್ಲ. ಇದರಲ್ಲೇನು ಬರೆದಿದೆ ಅಂತ ತಿಳಕೊಳ್ಳಬೇಕಾಗಿದೆ. ಆದಕ್ಕೇ ಸ್ವಚ್ಛಪಡಿಸುತ್ತಾ ಇದೇನೆ" ಎಂದ ಪ್ರಾಣೇಶ, ಗಂಭೀರವಾಗಿ.

"ಓ ಹಾಗೇನು!"—ಎನ್ನುತ್ತ ಅರ್ಚಕರು ತಮ್ಮ ನರೆತ ಮುಳ್ಳುಗಡ್ಡವನ್ನು ಸವರಿ ಒಂದು ಮಾರ್ಮಿಕವಾದ ನಗೆಯನ್ನು ನಕ್ಕರು. "ಹಾಗಂತ ಗೊತ್ತಿದ್ದಿದ್ದರೆ ನಿನ್ನೆ ನೀವು ಕೇಳಿದಾಗಲೇ ವಿವರವನ್ನೆಲ್ಲ ಹೇಳಿಬಿಡುತ್ತಿದ್ದೆ. ನೀವೇನೋ ವಿಚಾರಿಸಿದಿರಿ. ನಾನು ಬೋರ್ಡು ಅಂದುಬಿಟ್ಟೆ. ನೀವಿಷ್ಟು ಫಜೀತಿ ಪಡ್ತಾ ಇದ್ದಿರಿ ಅಂತ ಗೊತ್ತಿದ್ದಿದ್ದರೆ ಮೊದಲೇ ಎಲ್ಲಾ ಹೇಳಿಬಿಡ್ತಾ ಇದ್ದೆ. ಇದೇನು ಪುರಾತನ ವಾದ್ದಲ್ಲ ಸ್ವಾಮಿ. ಈಗ ಒಂದಿಪ್ಪತ್ತು ವರ್ಷಗಳ ಹಿಂದೆ ಕಲ್ಲುಹಲಗೆ ಮೇಲೆ ನಾವೇ ನಾಲ್ಕಕ್ಷರ ಕೊರೆಸಿ ಈ ಗುಡಿರಸ್ತೆಯ ಕೊನೆಯಲ್ಲಿ ನೆಡಿಸಿದ್ದೆವು, ಇದನ್ನ. ಕಾರು ಮೋಟರುಗಳೆಲ್ಲ ಬಂದು ಗುಡಿ ಬಾಗಿಲಿನ ತನಕ ಧೂಳೆಬ್ಬಿಸುತ್ತಾ ಇದ್ದವು. ಅದು ಕೂಡದು ದೂರದಲ್ಲೇ ನಿಲ್ಲಿಸಬೇಕು ಎಂದು ಬೋರ್ಡ್ ಬರೆಸುವ ಯೋಚನೆ ಮಾಡಿದಾಗ ಪೈಂಟಿನಲ್ಲಿ ಬೇಡ ಕಲ್ಲಿನಲ್ಲೆ ಕೊರೆಸಿಡೋಣ, ಶಾಶ್ವತವಾಗಿರುತ್ತೆ ಎಂದು ಕೆಲವರು ಅಭಿಪ್ರಾಯಪಟ್ಟರು. ಜೋಗಯ್ಯಾಂತಿದ್ದ ಇಲ್ಲಿ. ಶಿಲ್ಪದಲ್ಲಿ

ನಿಪುಣ. ತಾನು ಕೊರೆಯುತ್ತೀನೆ ಎಂದ. ಬಲುಬೇಗನೆ ನೀವು ಹೇಳೋ ಶಾಸನ ತಯಾರಿಸಿ ಕೊಟ್ಟ. ಇದನ್ನ ರಸ್ತೆಗೆ ಅಡ್ಡಲಾಗಿ ನಿಲ್ಲಿಸಿದೆವು. ಆದರೆ ಸರಕಾರ ಒಪ್ಪಲಿಲ್ಲ. ಗುಡಿತನಕವೂ ಸರಕಾರದ್ದೇ ರಸ್ತೆ, ಆತಂಕ ಮಾಡಕೂಡದು ಎಂದರು. ಈ ಕಲ್ಲನ್ನು ಕಿತ್ತುಹಾಕಿಸಿದರು. ಕೋರ್ಟಿಗೆ ಹೋದೆವು. ಅಲ್ಲಿಯೂ ಜಯವಾಗಲಿಲ್ಲ. ಆಮೇಲೆ ಈ ಕಲ್ಲು ಹೀಗೇನೇ ಬಿದ್ದಿದೆ. ಇದೇ ನಿಮ್ಮ ಶಾಸನ"—ಎಂದು ಇನ್ನೂ ಕೊಂಚ ನಕ್ಕರು. ಮತ್ತೂ ಮುಂದುವರಿಸಿ "ಇಲ್ಲಿ ಹಳೇ ಶಾಸನಗಳಿಗೇನೂ ಕಡಮೆ ಇರಲಿಲ್ಲ. ಆಗಲೇ ಇಲಾಖೆಯವರು ಬಂದು ಅವುಗಳನ್ನೆಲ್ಲ ಸಾಗಿಸಿಕೊಂಡು ಹೋಗಿದಾರೆ ಬಹಳ ವರ್ಷಗಳ ಹಿಂದೇನೆ. ಈಗ ಉಳಿದಿರೋದು ನಾವು ಬರೆಸಿದ ಈ ಶಾಸನ ಒಂದೇ"—ಎಂದರು.

ಅವರು ಪೂರ್ತಿ ಆಡಿ ಮುಗಿಸುವುದರೊಳಗೆ ಪ್ರಾಣೇಶನ ಉಸಿರಡಗಿಹೋಗು ವಂತಾಗಿತ್ತು. ತೆಂಗಿನ ಜುಟ್ಟು ತಾನಾಗಿ ಕೈಯಿಂದ ಜಾರಿಹೋಗಿತ್ತು. ಸುಸ್ತಾಗಿದ್ದು ಬೇರೆ, ಬೇಸ್ತುಬಿದ್ದಿದ್ದು ಬೇರೆ—ಬಹಳ ಕಷ್ಟದಿಂದ ಅರ್ಚಕರಿಗೆ ಉತ್ತರವೆಂಬಂತೆ "ಓಹೋ ಅಷ್ಟೇಯೇನು" ಎನ್ನುತ್ತಾ ಬೇಗನೆ ಕೈ ತೊಳೆದುಕೊಂಡು ಅಲ್ಲಿಂದ ಹೊರಟ. ಈ ಅವಧಿಯಲ್ಲಿ ಅವನ ಹೆಂಡತಿ ಬಹಳ ಕಷ್ಟದಿಂದ ನಗು ತಡೆದು ಕೊಂಡಳಂತೆ.

ಮನೆಗೆ ಬರುವಾಗ ದಾರಿಯಲ್ಲಿ ಪ್ರಾಣೇಶ ಹೆಂಡತಿಯೊಡನೆ ಆಡಿದ್ದಿಷ್ಟೆ. "ಯಾರಿಗೂ ಹೇಳಬೇಡ" "ರಾಮಣ್ಣನಿಗೆ (ಅಂದರೆ ನನಗೆ) ಏನಂತ ಬರೀತೀರಿ" —ಎಂದು ಆಕೆ ಕೇಳಿದ್ದಕ್ಕೆ ಪ್ರಾಣೇಶ "ಸರಿ, ಸರಿ....ಅವನಿಗೆ ಇದೆಲ್ಲಾ ಬರೆದರೆ ತೀರಿತು" — ಎಂದು ಪಾಣೇಶ ಬಾಯಿ ಹಾರಿಸಿದನಂತೆ. ಆದ್ದರಿಂದ ತಾನು ಬರೆದಿದ್ದೇನೆ ಎಂದು ತಿಳಿಸಿದ್ದಾಳೆ ಈಕೆ. ಕೊನೆಗೆ "ಕ್ಷಮಿಸಿ" ಅಂತ ಬೇರೆ. ಏನು ಕ್ಷಮಿಸೋದು? ಪ್ರಾಣೇಶ ಬೇಸ್ತು ಬಿದ್ದರೆ ನನಗೆ ಯಾವಾಗಲೂ ಖುಷಿ. ಅವನಿಗೂ ನನ್ನ ಕುರಿತು ಹಾಗೆಯೇ. (ನಾನು ಬೇಸ್ತುಬಿದ್ದ ಪ್ರಕರಣಗಳನ್ನು ಅವನು ಪ್ರಕಟಪಡಿಸುವ ಮೊದಲೇ ನಾನು ತಿಳಿಸಿಬಿಡುವುದು ಒಳ್ಳೆಯದು. ಗೊತ್ತು. ತಿಳಿಸುತ್ತೇನೆ) ಆದರೆ ಹುಡುಗಿಯರ ಮುಂದೆ ಹೇಗೆಯಾದರೂ ಬೇಸ್ತು ಬೀಳಕೂಡ ದೆಂದು ನನ್ನ ಅಭಿಪ್ರಾಯ.

ಮೂರನೆದಿನ ಪ್ರಾಣೇಶನ ಪತ್ರವೂ ಬಂತು. ಅದರಲ್ಲಿ politics ಎತ್ತಿಕೊಂಡು ಮೊದಲಿನಂತೆ ಬೋರುಮಾಡಿದ್ದನೇ ಹೊರತು ಸಂಶೋಧನೆಯ ಸದ್ದಿಲ್ಲ ಆದರೆ ಕೊನೆಗೆ ಒಂದು ಮಾತಿತ್ತು. "ಆಕೆ ಬರೆದಿದ್ದನ್ನ ಪೂರ್ತಿ ನಂಬಬೇಡ ತುಂಬ ಉಪ್ಪುಕಾರ ಬೆರೆಸಿದ್ದಾಳೆ" ಎಂದು ವಿ. ಸೂ. ಕೊಟ್ಟಿದ್ದ! ಆ ಉಪ್ಪುಖಾರಕ್ಕೆ ನಾನೂ ಕೊಂಚ ಸೇರಿಸಿದ್ದು ಕಂಡು ಆತ ಎಷ್ಟು ರೇಗುತ್ತಾನೋ!

—ರಾಮಿ.

# ಅನುಭವದಿಂದ ಬಂದ ಜ್ಞಾನ

ಶ್ರೀಗಂಧದ ಮರಗಳನ್ನು ಸಮೃದ್ಧವಾಗಿ ಬೆಳೆಸುವುದರ ರಹಸ್ಯವು ನೂರಾರು ವರ್ಷಗಳ ಅನುಭವವಾದ ಮೇಲೂ ಕೂಡಾ ಇನ್ನೂ ಮೈಸೂರು ಸೀಮೆಯೊಂದರ ವಶದಲ್ಲಿಯೇ ಇರುವ ಸ್ವತ್ತಾಗಿದೆ. ಮೈಸೂರು ಸರಕಾರದ ಕಾರ್ಖಾನೆಗಳಲ್ಲಿ ಬಟ್ಟಿಯಿಳಿಸಿದ ಅತ್ಯಂತ ಮನೋಹರವಾದ ಪರಿಮಳವುಳ್ಳ ಶ್ರೀಗಂಧದ ಎಣ್ಣೆಯೇ ಪ್ರಪಂಚದಲ್ಲೆಲ್ಲಾ ಅತ್ಯಂತ ಶ್ರೇಷ್ಠವಾದದ್ದು. ಈ ಎಣ್ಣೆಯು ಸರ್ವ ಸಮರ್ಪಕವಾದ ಸ್ಥಳ ಸನ್ನಿವೇಶದಲ್ಲಿ ಬೆಳೆದು ಕಡಿದು ಕೊಡಿಟ್ಟ ಶ್ರೀಗಂಧದ ಮರದಿಂದ ತಯಾರಾದದ್ದು. ಅದರ ಸುವಾಸನೆಯು ಮರದಲ್ಲಿ ಸಾಕ್ಷಾತ್ತಾಗಿರುವ ಎಣ್ಣೆಯದು ಹೇಗೆಯೋ ಹಾಗೆಯೇ ತುಂಬಿಕೊಂಡು ಸ್ವಲ್ಪವೂ ಕುಂದದೆ ಇರುತ್ತದೆ. ಲೋಕದಲ್ಲೆಲ್ಲಾ ಅತ್ಯಂತ ಶ್ರೇಷ್ಠವಾದ ಸಾಬೂನುಗಳ ಮತ್ತು ಪರಿಮಳ ದ್ರವ್ಯಗಳ ತಯಾರಿಕೆಯಲ್ಲಿ ಈ ಸುವಾಸನೆ ಉಪಯುಕ್ತವಾಗುತ್ತದೆ.



## ಮೈಸೂರು ಶ್ರೀಗಂಧದ ತೈಲ



**ಗವರ್ನಮೆಂಟ್ ಸ್ಯಾಂಡಲ್‌ಉಡ್ ಆಯಿಲ್ ಫ್ಯಾಕ್ಟರಿ,**
**ಮೈ ಸೂ ರು.**

REG. No. M. 4718 KORAVANJI, OTC. 1956



ಕಿರ್ಲೋಸ್ಕರ್
ಷರತ್ ನಂ. ೨
ಪವರ್
ಕಬ್ಬಿನ ಗಾಣಗಳು

೮ ರಿಂದ ೧೦ ಅಶ್ವಶಕ್ತಿಯ ಎಂಜಿನ್ ಅಥವಾ
ಎಲೆಕ್ಟ್ರಿಕ್ ಮೋಟಾರ್ ಸಹಾಯದಿಂದ
ನಡೆಸಲು ಅನುಕೂಲವಾಗಿವೆ.

---

ಎತ್ತುಗಳಿಂದ ನಡೆಸಲ್ಪಡುವ ಗಾಣಗಳೂ
ದೊರೆಯುತ್ತವೆ.



ಕಿರ್ಲೋಸ್ಕರ್ ಬ್ರದರ್ಸ್ ಲಿ.,
ಶ್ರೀ ನರಸಿಂಹರಾಜ ರಸ್ತೆ,
ಪೋಸ್ಟ್ ಬಾಕ್ಸ್ ೬೦೬ : : ಬೆಂಗಳೂರು ೨.

Printed by B. S. Iyengar, Bangalore City.
Publisher—B. N. Gupta. Editor—M. Sivaram.

*Koravanji*

ನವೆಂಬರ್

೧೯೫೬



ಸಂಪಾದಕರು :

ಶ್ರೀ|| ರಾ. ಶಿ.

ಬರಹಗಾರರು :

ಶ್ರೀ|| ಕಾಳಿ ಪ್ರಸಾದ್
ಶ್ರೀ|| ರಾಮು
ಶ್ರೀ|| ಅ. ರಾ ಸೇ.
ಶ್ರೀ|| ಹಾ. ರಾ.
ಶ್ರೀ|| ಕೇಫ
ಶ್ರೀ|| ಬಚ್ಚ
ಶ್ರೀ|| ಪ್ರಕಾಶ್

ಇತ್ಯಾದಿ, ಇತ್ಯಾದಿ.

Printed by B. S. Iyengar, Bangalore City.
Publisher—B. N. Gupta. Editor—M Sivaram.